# ಅಗ್ನಿ ಅಂಕುಶ



ರಾಜಕೀಯ ಮಾಸ ಪತ್ರಿಕೆ

...ಗುತ್ತಿದೆ

ಶಹಾಪುರ-ಗುಲ್ಬರ್ಗಾ ಮೇ 1991 ಸಂಪುಟ-1 ಸಂಚಿಕೆ- 8 ಬೆ...



ಅವಾಂತರಕಾರಿಯಾಗಲಿರುವ ಹತ್ತನೆಯ ಲೋಕಸಭೆ

ಬಾಗಿಲುಕೋಟೆಗೆ ವಕ್ಕರಿಸಿದ ಗುಳ್ಳೆನರಿ ಹೆಗಡೆ

ಕಲ್ಬುರ್ಗಿ ಕಣದಲ್ಲಿ ಜಂಗಿ ಕುಸ್ತಿ

ಹೊಣೆಗಾರಿಕೆ ಗೊತ್ತಿಲ್ಲದ ನಮ್ಮ ವಿರೋಧ ಪಕ್ಷಗಳು

ಬಸವನಿಲ್ಲದ ಬಸವಕಲ್ಯಾಣ

ರೈತಸಂಘದ ನಿಲುವು ಎಷ್ಟು ಮಟ್ಟಿಗೆ ಸರಿ ?

ಆ ಕಳಿಸುತ್ತಿದ್ದ ಬೆಕ್ಕು ಹಾಗೂ ಕೇದಾರ ಜಗದ್ಗುರು

ಜಿಮ್ನಾಸ್ಟಿಕ್ ಜಗತ್ತಿನ ರಾಣಿ

ಕಡಕೋಳ ಮಡಿವಾಳಪ್ಪ



## ...ಲಮೇಲ ಮಂಡಲದ ಪ್ರಧಾನ
## ...ಮಾರ ಗುಂದಗಿ ಅವರ ಹ್ಯಾಟ್ರಿಕ್

...ಕಾರ ವಹಿಸಿಕೊಂಡ ಮೂರು ತಿಂಗಳಲ್ಲಿಯೇ ... ಲಕ್ಷ ರೂ. ಸಾಲದಲ್ಲಿದ್ದ ಪಂಚಾಯತಿಯ ಎಲ್ಲ ಬಾಬತ್ತುಗಳನ್ನು ಪಾವತಿ ಮಾಡಿದ್ದು

- ಐ.ಆರ್.ಡಿ.ಪಿ. ಯೋಜನೆ ಜಾರಿಗೊಳಿಸುವಲ್ಲಿ ಸಾಕ್ಷರತಾ ಪ್ರಸಾರ ಹೆಚ್ಚು ವರಿಗೊಳಿಸುವಲ್ಲಿ ರೋಜಗಾರ ಹಾಗೂ ಕುಟುಂಬ ಯೋಜನಾ ಕಾರ್ಯಗಳಲ್ಲಿ 1989ರಿಂದ 1991ರ ವರೆಗೆ ಇಡೀ ಜಿಲ್ಲೆಯಲ್ಲೇ ಪ್ರಥಮ ಪ್ರಾಶಸ್ತ್ಯ ಪಡೆದು ಹ್ಯಾಟ್ರಿಕ್ ಪಡೆದದ್ದು
- ಕಡಣಿ, ವಿಭೂತಿಹಳ್ಳಿ ಗುಡ್ಡಳ್ಳಿಗಳಲ್ಲಿ ಶಾಲಾಕಟ್ಟಡ ನಿರ್ಮಾಣ
- ಕಡಣಿಯಿಂದ ತಾವರಖೇಡ; ವಿಭೂತಿಹಳ್ಳಿಯಿಂದ ಗುಡ್ಡಳ್ಳಿ ಆಲಮೇಲ ಹಾಗೂ ಹೊಸತಾವರಖೇಡ ರಸ್ತೆಗಳನಿರ್ಮಾಣ
- ಬಹುಮುಖ್ಯ ಅಗತ್ಯಗಳಾದ 12 ಮಹಿಳಾ ಶೌಚಾಲಯ ದೋಭಿಘಾಟ್ ಹಾಗೂ ಚರಂಡಿಗಳ ನಿರ್ಮಾಣಗೈದದ್ದು
- ಆಲಮೇಲದಲ್ಲಿ ರಸ್ತೆ ದುರಸ್ತಿ ಹಾಗೂ ಮಾರ್ಕೆಟ್ ಮಳಿಗೆ ಕಟ್ಟಿಸಿದ್ದು

---

## ...ಗ್ನಿ ಅಂಕುರ

ಸಂಪುಟ 1 ಸಂಚಿಕೆ 8
ಮೇ 1991

ಅಂತರಂಗ

...ದಿ–ವಿಮರ್ಶೆ
● ಅಪಾಯಕಾರಿ ಆಗಬಹುದಾದ 10 ನೆಯ ಲೋಕಸಭೆ
● ಕಲ್ಬುರ್ಗಿ ಕಣದಲ್ಲಿ ಜಂಗಿ ಕುಸ್ತಿ
● ಬಾಗಿಲ್ಕೋಟೆಗೆ ವಕ್ಕರಿಸಿದ ಗುಳ್ಳೆನರಿ ಹೆಗಡೆ
● ಹೊಣೆಗಾರಿಕೆ ಗೊತ್ತಿಲ್ಲದ ನಮ್ಮ ವಿರೋಧ ಪಕ್ಷಗಳು
● ರೈತ ಸಂಘದ ನಿಲುವು ಎಷ್ಟರ ಮಟ್ಟಿಗೆ ಸರಿ ?

...ಕಾರ
● ತಪ್ಪು ಯಾರದು ?
● ದಿಲ್ಲಿ ನಾಯಕ ಸಾನಿಯನ್ನು ಯಾರು ಬಲ್ಲಿರಿ ?

...ಶೇಷ ಲೇಖನ
... ● ಶರೀಫ ಸಾಹೇಬನೂ ಕಡಕೋಳ ಮಡಿವಾಳಪ್ಪನೂ

...ವಿತೆ
...1 ● ಶ್ರೀ ಬಸವೇಶ್ವರರಿಗೆ

...ದರ್ಶನ
...3 ● ಆಕಳಿಸುತ್ತಿದ್ದ ಬೆಕ್ಕು ಹಾಗೂ ಕೇದಾರದ ಜಗದ್ಗುರು
...2 ● ದೋರನಹಳ್ಳಿಯ ಪ್ರಧಾನ

...ಾಸ್ಯ ವಿಡಂಬನೆ
...8 ● ಕದಲ ಬದಲ ಕವಡೆಕಾಯಿ




## ಬಾಗಿಲ್ಕೋಟೆ ಮುಳುಗುತ್ತಿದೆ

"ಬೂಸೀs..ಬೂಸೀs...ಯಾಕೋ ಗಾಭರಿಯಾಗಿದ್ದಂಗೆ ಕಾಣ್ತಿಯಲ್ಲೇ ?"

"ಇಷ್ಟರಲ್ಲೇ ಬಾಗಲಕೋಟಿ ಮುಣುಗಿ ಹೋಗ್ತಾದ ಅದಕ್ಕೆ !......"

"ಹೌದ್ ಬಿಡು ! ಕೃಷ್ಣಾ ಆಣೆಕಟ್ಟಿನಾಗ ಮುಳುಗಿ ಹೋಗ್ತಾದಂತ. ಇದು ಎಲ್ಲೋರಿಗೂ ಮೊದ್ಲೇ ಗೊತ್ತಾದ. ಅದಕ್ಯಾಕ ಗಾಭರಿ ಆಗ್ತೀದಿ ?"

"ಅದಿನ್ನೂ ತಡ ಐತಿ ! ಅದಕ್ಕಿಂತ ಮೊದ್ಲೇ ಈಗ ಹೆಗಡೆ ಮಹಾಶಯರ ಭಾಷಣದಾಗ ಮುಣು ಮುಣುಗಿ ಹೋಗ್ತಾದ. ಅದಕ್ಕಂತ ಭಯವಾಗ್ತಾದ !"

ಎನ್ನುತ್ತ ಬೂಸಿ ಕಣ್ಮರೆಯಾಯಿತು.

---

ಸಂಪಾದಕರು
**ವಿಶ್ವಾರಾಧ್ಯ ಸತ್ಯಂಪೇಟೆ**
ಸಹ ಸಂಪಾದಕರು
**ಸಿದ್ಧರಾಮು ಉಪ್ಪಿನ**
ಸಂಪಾದಕೀಯ ಸಲಹೆ...
**ಲಿಂಗಣ್ಣ ಸತ್ಯ...**
[ಸಾಹಿತ್ಯ, ವಿಚಾರ, ...
**ರಾಜೇಂ...**
[ರಾಜಕೀಯ, ...

...ಎಂದು
...ಿ ಕಲ್ಬುರ್ಗಿ
...ಎಂಬುದು ನಮ್ಮ
...ದಿ ಬರೆದ ಉಮಾ
...ಕರ.

—ಭೀಮರಡ್ಡಿ ಪಾಟೀಲ

## ಪ್ರತಿಧ್ವನಿ

ಪ್ರಿಯರೇ,

ರಾಜಕೀಯವಾಗಿ ಪ್ರಾಥಮಿಕ ಜ್ಞಾನವಿಲ್ಲದವರಿಗೂ ಉಪಯುಕ್ತವಾಗಬಲ್ಲಂಥ ಆ ಮೂಲಕ ಜನ ಸಾಮಾನ್ಯರಿಗೂ ರಾಜಕೀಯ ವಿಮರ್ಶಾ ಪ್ರಜ್ಞೆ ಮೂಡಿಸಬಲ್ಲ ಕೆಲಸವನ್ನು 'ಅಗ್ನಿ ಅಂಕುರ' ಮಾಡುತ್ತಿದೆ.

ಇವತ್ತಿನ ರಾಜಕೀಯ ಪರಿಸರದಲ್ಲಂತೂ ಅದೊಂದು ಕೈಪಿಡಿಯಾಗಿದೆ.

ಸೇಡಂ —ಪ್ರಭಾಕರ ಜೋಶಿ

ಸಂಪಾದಕರೆ,

ಎಪ್ರಿಲ್ ತಿಂಗಳ ಸಂಚಿಕೆ ಪೂರ್ತಿ ರಾಜಕೀಯ ವಿಷಯಗಳನ್ನೊಳಗೊಂಡಿದೆ. ನಮ್ಮ ರಾಜ್ಯದ ನಾಯಕರುಗಳಾದ ಹೆಗಡೆ, ವೀರೆಂದ್ರ, ಹಾಗೂ ರಾಯಚೂರಿನ ನಾಲಾಯಕ ನಾಯಕರುಗಳ ಬಗೆಗಿನ ವಸ್ತುನಿಷ್ಠ ವರದಿಗಳು ಸಮರ್ಪಕವಾಗಿ ಬಂದಿದೆ.

ಈ ವರೆಗೂ ನಮ್ಮ ಭಾಗದಲ್ಲಿ ಇಂಥ ಪತ್ರಿಕೆಗಳೇ ಇರಲಿಲ್ಲ. ಆ ಕೊರತೆಯನ್ನು 'ಅಗ್ನಿ ಅಂಕುರ' ನೀಗಿಸಿದೆ. ಪತ್ರಿಕೆ ನಮ್ಮ ...ಿಗೆ ಬಡಿದೆಚ್ಚರಿಸುವ ಅಗ್ನಿಯಾಗಿದೆ.

ಬ... —ವಿಶ್ವನಾಥ ಪತಂಗೆ

✖ ದೋಭ...

...ರ' ಇಂದಿನ ಅವಶ್ಯಕತೆ

✖ ಆಲಮೇಲ... ...ೀ ತಿಂಗಳುಗಳಲ್ಲಿಯೇ

ಕಟ್ಟಿಸಿದ್ದು ಎಲ್ಲರೂ ಚಿಂತನೆಗೆ

...ಯಶಸ್ವಿಯಾಗಿದೆ.

ಪ್ರಕಟಣೆ : ಮುಂ...

## ಪತ್ರಿಕೆ ಹೆಸರು ಅರ್ಥಪೂ...

—ಡಾ. ಎಂ. ಎಂ. ಕಲಬು...

ಹೀಗೆ ನಿಖರವಾಗಿ ಬರೆಯುವುದು ನನಗಂ... ತುಂಬಾ ಸಂತೋಷವನ್ನುಂಟುಮಾಡಿದೆ.

ರಾಯಚೂರ —ಬಸವರಾಜ ಜಿ. ಪಾ...

ಸಂಪಾದಕರೆ,

'ಅಗ್ನಿ ಅಂಕುರ' ತಪ್ಪದೆ ಓದುತ್ತೆ... ಬೆಂಕಿಯಂಥ ಸುದ್ದಿ, ಬೆಂಕಿಯಂಥ ಭ... ಗಳಿಂದಾಗಿ ಪತ್ರಿಕೆಯ ಹೆಸರು ಅರ್ಥಪೂ... ವೆನಿಸಿದೆ.

ಧಾರವಾಡ —ಡಾ. ಎಂ. ಎಂ. ಕಲಬು...

ಆತ್ಮೀಯ ವಿಶುಗೆ,

ಡಾ. ಲೋಹಿಯಾ ಅವರ 'ರಾಜಕೀ... ದೊಂಬರಾಟ' ಓದಿದೆ. ಅವರು ಇಂದಿನ ರ... ಕೀಯದ ಬಗ್ಗೆ ಮಂಡಿಸಿದ ವಿಚಾರಗ... ಸಮಂಜಸವಾಗಿವೆ. ಇಂದಿನ ರಾಜಕೀಯ ತುಂ... ಮಲಿನವಾಗಿದೆ. ಕೆಟ್ಟ, ಸ್ವಾರ್ಥ ಹಾಗೂ ... ಭ್ರಷ್ಟಾಚಾರದಿಂದ ತುಳುಕಾಡುತ್ತಿದೆ. ... ಸಮಸ್ಯೆಗಳನ್ನು ಪರಿಹರಿಸಲು ಬಸವಣ್ಣನ... ಪ್ರಾಮಾಣಿಕರು ಬೇಕು. ಇದನ್ನು ಅ... ಸಂಚಿಕೆಯಲ್ಲಿ ಡಾ. ಪೂಜಾರರು ಚೆನ್ನಾ... ಬರೆದಿದ್ದಾರೆ.

ಶಹಾಪೂರ —ಶಿವಣ್ಣ ಇಜ...

ಮಾನ್ಯರೇ,

ಪತ್ರಿಕೆಯ ಎಲ್ಲಾ ಸಂಚಿಕೆಗಳ... ಓದುತ್ತಾ ಬಂದಿದ್ದೇನೆ. ಸರಳ ನಿರೂಪ... ಸ್ಪಷ್ಟ ಶೈಲಿ ತುಂಬಾ ಹಿಡಿಸಿದೆ. ರಾಜಕೀ... ವಿಷಯಗಳನ್ನು ಯಾರ-ಯಾವ ಮುಲಾ... ಒಳಗಾಗದೆ ಬರೆಯುತ್ತೀರಲ್ಲ ಇದು ಪತ್ರಿಕೆ... ಧೋರಣೆಯನ್ನು ತಿಳಿಸುತ್ತದೆ.

ಎಪ್ರಿಲ್ 1991ರ ಸಂಚಿಕೆಯಲ್ಲಿ ಪ್ರಕಟ ದ"ಬಾದಾಮಿ ಬಸ್ ನಿಲ್ದಾಣದಲ್ಲಿ ಕಂಡದ್ದು" ಬ ಲೇಖನ ಓದಿದೆ, ಇಂತಹ ಕನಿಷ್ಠ ಅವಶ್ಯ ಗಳಿಗೂ ಸ್ಪಂದಿಸದ ಸರಕಾರ ಯಾಕೆ ಇರ ಕು ? ಎಂಬ ಯೋಚನೆ ಬಂತು.

ಲಬರ್ಗಾ —ಭಗವಂತಪ್ಪಾ ಬುಳ್ಳಾ

ಾನ್ಯ ಸಂಪಾದಕರಿಗೆ,

ಕಲ್ಯಾಣ ಕರ್ನಾಟಕದ ಹೆಬ್ಬಾಗಿಲಾದ ಬುರ್ಗಿಗೆ ಇಂಥ ಪತ್ರಿಕೆಯ ಕೊರತೆ ಇತ್ತು. ದನ್ನು ತಮ್ಮ ಪತ್ರಿಕೆ ನಿಗಿಸಿದೆ. ಕೆಲವೇ ಗಳಲ್ಲೇ ಪತ್ರಿಕೆ ಪಡೆದಿರುವ ಜನಪ್ರಿಯತೆ ಮನಾರ್ಹವಾದುದು.

ಸಮಾಜದಲ್ಲಿಯ ಘಾತಕ ಶಕ್ತಿಗಳನ್ನು ಯಲಿಗೆಳೆಯುವಲ್ಲಿ ಪತ್ರಿಕೆ ಮಹತ್ವದ ಕೆಲಸ ಾಡುತ್ತಿದೆ. ಇದಕ್ಕಾಗಿ ಪತ್ರಿಕೆ ನನಗೆ ಇಷ್ಟ ಾಗಿದೆ.

ತಾಪೂರ —ರಾಜಶೇಖರ ಗೊಣಗಿ

ಂಪಾದಕರೆ,

'ಅಗ್ನಿ ಅಂಕುರ'ದ ಲೇಖನಗಳು ಸಮಾಜ ಲ್ಲಿ ನಕಲಿ ಮುಖವಾಡ ಹಾಕಿ ಮೆರೆಯುವವರ ಸಲಿತನವನ್ನು ಬಯಲಿಗೆಳೆಯುತ್ತಿದೆ ಂತೋಷ.ಇಂತಹ ಪತ್ರಿಕೆ ಎಲ್ಲ ಕಡೆಗೂ ಹರಡ ೇಕು. ನಿಮ್ಮ ಈ ಸಾಹಸಕ್ಕೆ ಧನ್ಯವಾದಗಳು.

ಾಂಬಾ —ಮಹಾಂತೇಶ ಆಲೇಗಾವಿ

ಂಪಾದಕರೆ,

ಪ್ರಸ್ತುತ ಎಪ್ರಿಲ್ ತಿಂಗಳ ಸಂಚಿಕೆಯ ಎಲ್ಲಾ ಲೇಖನಗಳೂ ಚೆನ್ನಾಗಿವೆ. ನಮ್ಮೂರ ಬದಾಮಿ'ಯ ಕುರಿತು ಬರೆದ ಬರಹ ಸಂಬಂಧ ಪಟ್ಟ ವ್ಯಕ್ತಿಗಳಿಗೆ ರಾಮಬಾಣವಾಗಿ ನಾಟಿದೆ. ಇಂಥ ಮೊನಚಾದ ಬರಹ ಇಂದಿನ ಜಡ್ಡುಗಟ್ಟಿದ ವ್ಯವಸ್ಥೆಗೆ ಅಗತ್ಯ.

ಬದಾಮಿ —ಮಹಾಂತೇಶ ಚ. ನಾಲತವಾಡ

ಸಂಪಾದಕರೆ,

'ಅಗ್ನಿ ಅಂಕುರ'ದ ವರದಿ, ಲೇಖನ ಚುಟುಕುಗಳು ಸಹಿತ ಅಗ್ನಿಯಂತೆಯೆ ಹೊರ ಬರುತ್ತಿದೆ. ಸ್ವಾಮೀಜಿಗಳ ಠಕ್ಕುತನ ಬಯಲಿ ಗೆಳೆಯುವುದರ ಜೊತೆಗೆ ಒಳ್ಳೆಯವರನ್ನು ಕಂಡು ಶ್ಲಾಘಿಸುವ ನಿಮ್ಮ ರೀತಿ ನನಗೆ ಹಿಡಿಸಿದೆ.

ಪೂಜ್ಯ ಶ್ರೀ ತೋಂಟದಾರ್ಯರ ಕುರಿತ 'ಲಿಂ ಸ' ಅವರು ಬರೆದ ಬರಹ ಅಕ್ಷರಶಃ ಸತ್ಯ. ಸಾಹಿತ್ಯದ ಪ್ರಕಟಣೆಗಾಗಿ ಅವರು ಪಡುತ್ತಿರುವ ಶ್ರಮ ಎಲ್ಲವನ್ನೂ ಎಳೆಎಳೆಯಾಗಿ ಬರೆದಿರುವಿರಿ ಧನ್ಯವಾದಗಳು.

ಸಾಲೋಟಗಿ —ಬಸವರಾಜ ಬಿ, ದೇಸಾಯಿ

ಸಂಪಾದಕರೆ,

ಕಲ್ಬುರ್ಗಿ ಕಾರ್ಪೊರೇಟರಗಳೇ ಏನು ಮಾಡುತ್ತಿರಿ? ಎಂಬ ವರದಿ ಕಾರ್ಪೊರೇಟರಗಳ ಮುಖಕ್ಕೆ ರಾಚುವಂತಿತ್ತು. ಕಲ್ಬುರ್ಗಿಯನ್ನು ನಂದನವನವನ್ನಾಗಿ ಮಾಡುತ್ತೇವೆ ಎಂದು ಆಯ್ಕೆಯಾಗಿ ಬಂದ ನಂತರ ಅವರು ಕಲ್ಬುರ್ಗಿ ಯನ್ನು ಹೇಗೆ ಮಾಡಿದ್ದಾರೆಂಬುದು ನಮ್ಮ ಕಣ್ಮುಂದೆಯೇ ಇದೆ. ಈ ವರದಿ ಬರೆದ ಉಮಾ ತನಯರಾಜುಗೆ ನಮಸ್ಕಾರ.

ವಡ್ನಳ್ಳಿ —ಭೀಮರಡ್ಡಿ ಪಾಟೀಲ

# ಶತಾಯುಷಿ ಶರಣ ಭಾಲ್ಕಿಯ ಪಟ್ಟದ್ದೇವರು



ಶರಣ ಎಂಬ ಪದ ಕಿವಿಗೆ ಬಿದ್ದೊಡನೆಯೇ ನಮಗೆ ಅದೂಂದು ಬಗೆಯ ಕ್ಲೀಷೆಯ ಪದ ಕೇಳಿಸಿದಂತೆ ಆಗುತ್ತದೆ, ಏಕೆಂದರೆ ಶರಣರೆಂದು ಕರೆಯಿಸಿಕೊಳ್ಳುವ ಇಂದಿನ ಜನಗಳೆಲ್ಲ ಎಂಥ ಶರಣರೆಂದು ನಮಗೆಲ್ಲ ಚೆನ್ನಾಗಿ ಗೊತ್ತು ಆದರೆ ಬೀದರ್ ಜಿಲ್ಲೆ ಭಾಲ್ಕಿಯ ಶತಾಯುಷಿ ಗಳಾದ ಪೂಜ್ಯ ಚೆನ್ನಬಸವ ಪಟ್ಟದ್ದೇವರು ಈ ಮಾತಿಗೆ ಹೊರತು. ಅವರನ್ನು ಕಂಡರೆ, ಅವರೊಂದಿಗೆ ಮಾತಾಡಿದರೆ. ಅವರ ಭಾವನೆಗಳನ್ನು ಅರ್ಥಮಾಡಿಕೊಂಡರೆ, ಅವರ ಚಟುವಟಿಕೆಗಳನ್ನು ಗಮನಿಸಿದರೆ, ನಮಗೆ ನಿಜಕ್ಕೂ ಹನ್ನೆರಡನೆಯ ಶತಮಾನದ ಶರಣರೇ ಕಣ್ಣೆದುರು ಬಂದಂತಾಗುತ್ತದೆ.

ಅವರದು ಅತ್ಯಂತ ಸರಳವಾದ ಜೀವನ. ಸರಳ ಜೀವನವೇ ಅವರ ಮುಖ್ಯ ಬಂಡವಾಳ. ಕಾವಿಪಂಚೆ, ಅಂಗಿ, ರುಮಾಲು ಎಲ್ಲವೂ ಸಾದಾ. ಮಂತ್ರ ತಂತ್ರಗಳಲ್ಲಿ ನಂಬಿಕೆ ಇಲ್ಲ, ವೇದಿಕೆ ಗೀದಿಕೆ ಬೇಕಿಲ್ಲ. ಪಾಂಡಿತ್ಯ ಗೀಂಡಿತ್ಯ ಎಂಥದೂ ಇಲ್ಲ, ಈ ಇಳಿ ವಯಸ್ಸಿನಲ್ಲಿಯೂ ಹೊಲದಲ್ಲಿ ಕೆಲಸ. ಗುರುವಾದರೂ, ಜಂಗಮವಾದರೂ, ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿಯಬೇಕು ಎಂಬ ಶೀಲ. ಯಾವ ಆಡಂಬರವನ್ನು ಮೆರೆಯದೆ, ಯಾವ ಅಧಿಕಾರದ ಸ್ಥಾನಮಾನವಿಲ್ಲದೆ, ತಮ್ಮ ಸಹಜ ಸರಳ ನಡುವಳಿಕೆಯಿಂದಲೇ ಏನೆಲ್ಲ ಸಾಧಿಸಬಹುದು ಎಂಬುದಕ್ಕೆ ಪೂಜ್ಯರು ಒಂದು ದೊಡ್ಡ ನಿದರ್ಶನ. ಬಸವಣ್ಣ ಇವರ ಆರಾಧ್ಯ ದೈವ. ಆದ್ದರಿಂದಲೇ ಇವರಿಗೆ, ಹರಿಜನ ಗಿರಿಜನ ನಿಮ್ನ ವರ್ಗದ ಜನಗಳೆಂದರೆ ಪಂಚಪ್ರಾಣ. ಸಮಾಜದ ಯಾವ ವಿರೋಧವನ್ನೂ ಲೆಕ್ಕಿಸದೆ, ತಮ್ಮ ಮಠದ ಬಾವಿಯನ್ನು ಹರಿಜನ ಮಕ್ಕಳಿಗೆ ಮುಟ್ಟಿಸಿದ್ದು ಮಾತ್ರವಲ್ಲ; ಅವರಿಗೆಲ್ಲ ಸರಿಸಮಾನತೆಯ ದೀಕ್ಷೆ ಕೊಟ್ಟು, ಉತ್ತಮ ಶಿಕ್ಷಣ ನೀಡಿ, ಅವರನ್ನೂ ನಾವು ಸಮ ನಿಮಗೆಂದು ತಲೆಎತ್ತಿ ನಿಲ್ಲುವಂತೆ ಮಾಡಿದ್ದು, ಅವರ ಜೀವನದ ಬಹುದೊಡ್ಡ ಪವಾಡ: ಇದಕ್ಕೆ ಬೆಲದಾಳ ಶರಣರು ಪ್ರತ್ಯಕ್ಷ ಉದಾಹರಣೆ. ಹರಿಜನ ಕೋಮಿಗೆ ಸೇರಿದ್ದ ಈ ವ್ಯಕ್ತಿಗೆ ಪೂಜ್ಯ ಸ್ವಾಮೀಜಿಯವರೇ ಜಂಗಮ ದೀಕ್ಷೆಯನ್ನು ನೀಡಿ ಈಗ ಅವರಿಂದಲೇ ಉಳಿದವರಿಗೂ ದೀಕ್ಷೆ ಕೊಡಿಸುವ ಕೆಲಸ ಮಾಡಿಸುತ್ತಿದ್ದಾರೆ. ಇದು ಅನೇಕರಿಗೆ ಅಚ್ಚರಿ ತರಬಹುದಾದರೂ ನಿಜವಾದ ಸಂಗತಿ.

ಹೆಗಡೆ ಕಲ್ಯಾಣಕ್ಕೆ ಬಂದಾಗ್ಗ ಸ್ವಾಮೀಜಿ ಹೇಳಿದ್ದರು : "ಹೆಗಡೆಯವರೇ ನೀವು ಊರೂರಿಗೆ, ಸೆರೆ ಸೇಂದಿ, ಬೀರು ಬ್ರಾಂಡಿ ಅಂಗಡಿ ತೆರೆದಿದ್ದೀರಿ ಇದರಿಂದಾಗಿ ಕುಡಿದು ಮತ್ತರಾದ ಬಡವರು ಬೀದಿ ಬೀದಿಗರಿಲ್ಲಿ ಬೀಳುತ್ತಿದ್ದಾರೆ. ಅವರನ್ನು ಎತ್ತಿಕೊಂಡೊಯ್ದು ಅವರವರ ಮನೆಗಳಿಗೆ ಮುಟ್ಟಿಸುವ ಕೆಲಸ ನಮಗೆ ಹಚ್ಚಿದ್ದೀರಿ. ಆದರೆ ರೊಕ್ಕ ಮಾತ್ರ ನೀವು ಎಣಿಸಿಕೊಳ್ಳುತ್ತೀರಿ. ಮೊದಲು ಸೆರೆ ಸೇಂದಿ ಅಂಗಡಿ ಬಂದ ಮಾಡ್ರಿ. ಇಂಥ ನ್ಯಾಯ ನಿಷ್ಠುರಿ ಶರಣರು ಈಗ ಎಷ್ಟಿದ್ದಾರೆ ?

—ಎಲ್.ಎಸ್



## ಕೆಲವು ಅನಿಸಿಕೆಗಳು

# ಚಂದಾದಾರ ಮಿತ್ರರಲ್ಲಿ ವಿನಂತಿ

ಪತ್ರಿಕೆಯನ್ನು ಜನಸಾಮಾನ್ಯರಿಗೆ ತಲುಪಿಸಬೇಕಾದರೆ, ಅದನ್ನು ಅವರಿಗೆ ತಿಳಿಯುವ ಭಾಷೆಯಲ್ಲಿ ಬರೆಯಬೇಕಾದುದು ಎಷ್ಟು ಆಗತ್ಯವೋ, ಹಾಗೆ ಅವರ ಕೈಗೆಟಕುವ ಕಡಿಮೆ ದರದಲ್ಲಿ ತಲುಪಿಸುವುದೂ ಅಷ್ಟೇ ಅಗತ್ಯ. ಆದ್ದರಿಂದ ಆರಂಭದಲ್ಲಿ ಈ ಪತ್ರಿಕೆಯ ಬಿಡಿ ಪ್ರತಿ ಬೆಲೆಯನ್ನು ಕೇವಲ ಎರಡು ಎಂದೂ, ವಾರ್ಷಿಕ ಚಂದಾವನ್ನು 25 ರೂ. ಗಳೆಂದೂ ನಿಗದಿ ಮಾಡಿದ್ದೆ. ಹಾಗೂ ಅದೇ ಪ್ರಕಾರವೇ ಅನೇಕ ಮಿತ್ರರಲ್ಲಿ ವಾರ್ಷಿಕ ವರ್ಗಣಿ 25 ರೂ. ಗಳನ್ನು ಪಡೆದುಕೊಂಡಿದೆ,

ಆದರೆ ಪತ್ರಿಕೆ ಹೊರಬರುವಷ್ಟರಲ್ಲಿಯೇ ಕೇಂದ್ರ ಸರಕಾರ ಕಾಗದದ ಬೆಲೆಯನ್ನು ವಿಪರೀತ ಏರಿಸಿತು. ಆಗ ನನ್ನ ಯೋಚನೆ ಅನಿವಾರ್ಯವಾಗಿ ತಲೆಕೆಳಗಾಯಿತು. ಬಿಡಿಪ್ರತಿ ಎರಡು ರೂ. ಗೆ ಬದಲಾಗಿ ಮೂರು ರೂ. ಗೆ, ವಾರ್ಷಿಕ ಚಂದಾ 25 ರೂ. ಗೆ ಬದಲಾಗಿ 35 ರೂ. ಗೆ [ವಿಶೇಷ ಸಂಚಿಕೆ ಸೇರಿ 40 ರೂ.] ಏರಿಸುವುದು ಅಗತ್ಯವಾಯಿತು.

ಈ ಪ್ರಕಾರ ಅಕ್ಟೋಬರ್ 90 ರಿಂದ ಮೇ 91 ರ ವರೆಗೆ ಅಂದರೆ ಎಂಟು ತಿಂಗಳ ವರೆಗೆ 3 ರೂ.ಗಳ ಬಿಡಿ ಪ್ರತಿಯನ್ನು ನಿಮಗೆ ತಲುಪಿಸಿದ್ದೇನೆ. ಅಂದರೆ 24 ರೂ. ಗಳ ಪತ್ರಿಕೆ ನಿಮಗೆ ಮುಟ್ಟಿದೆ. ಇನ್ನುಳಿದ ನಿಮ್ಮ ಒಂದು ರೂಪಾಯಿ ಹಾಗೂ ನನ್ನ ಒಂದು ರೂಪಾಯಿ ಸೇರಿ ಅಂಚೆ ವೆಚ್ಚಕ್ಕೆ ಖರ್ಚಾಗಿದೆ. ಹೀಗಾಗಿ ಈ ಮೇ ತಿಂಗಳಿಗೆ 25 ರೂ. ವಾರ್ಷಿಕ ಚಂದಾ ಕೊಟ್ಟವರ ಅವಧಿ ಮುಗಿಯುತ್ತದೆ. ಆದ್ದರಿಂದ ಚಂದಾದಾರರಾಗಲು ಇಚ್ಛಿಸುವವರು ಮುಂದಿನ ಜೂನ್‌ದಿಂದ, ಮತ್ತೆ ಹೊಸದಾಗಿ ತಮ್ಮ ಹೆಸರುಗಳನ್ನು ನೊಂದಾಯಿಸುವುದು ಆಗತ್ಯ. ಕಾರಣ ಪತ್ರಿಕೆ ಬೇಕಾದವರು ನಮಗೆ ಒಂದು ಕಾರ್ಡು ಹಾಕಿ, ಪತ್ರಿಕೆ ಕಳಿಸಿಕೊಡಿ ಎಂದು ತಿಳಿಸಿದರೆ ಸಾಕು. ಪತ್ರಿಕೆ ಕಳಿಸುತ್ತೇವೆ ಹಾಗು ತರುವಾಯ ನಾವೇ ಖುದ್ದಾಗಿ ಬಂದು ನಿಮ್ಮ ಹತ್ತಿರ ಚಂದಾ ಪಡಯುತ್ತೇವೆ.

ಪತ್ರಿಕೆಯ ಪ್ರಸಾರ ಸಂಖ್ಯೆ ದಿನೇ ದಿನೇ ಏರುತ್ತಿವೆ. ಆದ್ದರಿಂದ ಚಂದಾಹಣ ನೀಡಿ ಸಹಕರಿಸುವ ಎಲ್ಲ ಓದುಗ ಮಿತ್ರರಿಗೆ ಜಾಹೀರಾತುದಾರರಿಗೆ ಹೃತ್ಪೂರ್ವಕ ವಂದನೆಗಳು

ಶಹಾಪುರ — ಲಿಂಗಣ್ಣ ಸತ್ಯಂಪೇಟೆ

# ಅಪಾಯಕಾರಿ ಆಗಬಹುದಾದ 10ನೇ ಲೋಕಸಭೆ



ಮುಂಬರುವ ಜೂನ್ 5 ಕ್ಕೆ ಹತ್ತನೆಯ ಲೋಕಸಭೆ ಆರಂಭಗೊಳ್ಳುತ್ತದೆ. ಹಾಗಾದರೆ ಆ ಲೋಕಸಭೆಯ ಆಧಿಪತ್ಯವನ್ನು ಯಾವ ಪಕ್ಷ ವಹಿಸಿಕೊಳ್ಳಬಹುದು ? ಹಾಗೂ ಯಾರು ಪ್ರಧಾನಿಯಾಗಿ ಪ್ರಜಾಸತ್ತೆಯನ್ನು ಮುನ್ನಡೆಸಬಹುದು ? ಈ ಬಗ್ಗೆ ಅನೇಕ ಬಗೆಯ ಜಿಜ್ಞಾಸೆಗಳು ಕೇಳಿಬರುತ್ತಿವೆ.

ಆದರೆ ಇಷ್ಟು ಮಾತ್ರ; ಯಾವ ಪಕ್ಷವೇ ಆಧಿಪತ್ಯವಹಿಸಿಕೊಳ್ಳಲಿ, ಅಥವಾ ಯಾರೇ ಪ್ರಧಾನಿಯಾಗಲಿ, ಅವರಾರೂ ಐದು ವರ್ಷಗಳ ಕಾಲ ಸುಖಾಂತವಾದ ಆಡಳಿತ ಕೊಡುವುದು ತುಂಬಾ ಕಷ್ಟವಾಗುತ್ತದೆ. ಏಕೆಂದರೆ ಈಗ ಎಲ್ಲ ಪಕ್ಷಗಳಲ್ಲೂ ಸೈದ್ಧಾಂತಿಕ ನಿಲುವು ಹಿಂದೆ ಸರಿದು, ವೈಯ್ಯಕ್ತಿಕ ಹೆಚ್ಚುಗಾರಿಕೆಯದೇ ಮೇಲುಗೈ ಪಡೆಯತೊಡಗಿದೆ, ತಮ್ಮ ವೈಯ್ಯಕ್ತಿಕ ತೆವಲುಗಳಿಗೆ ಸೈದ್ಧಾಂತಿಕ ಸ್ವರೂಪ ಕೊಡುವ ಯತ್ನ ನಡೆಯುತ್ತಿದೆ. ವಿಷಾದದಿಂದ ಹೇಳಬೇಕೆಂದರೆ ಈ ಕ್ರಿಯೆಯನ್ನು ಆರಂಭ ಮಾಡಿದ ಮೊದಲಿಗರೆಂದರೆ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಮಾತ್ರ! ಅವರ ತಂದೆ ಜವಾಹರಲಾಲರಾಗಲಿ, ತರುವಾಯ ಬಂದ ಲಾಲಬಹಾದ್ದೂರರಾಗಲಿ, ಅವರೆಂದೂ ತಮ್ಮ ವೈಯ್ಯಕ್ತಿಕತೆಯನ್ನು ಇಷ್ಟೊಂದು ವಿಪರೀತವಾಗಿ ರಾಜಕೀಯಕ್ಕೆ ತಂದಿರಲಿಲ್ಲ.

ತಾನು ಪ್ರಧಾನಿ ಪಟ್ಟದ ಮೇಲೆ ಕೂಡುವವರೆಗೆ ತನ್ನ ಪಕ್ಷದ ಹಿರಿಯರ ಆಧಿಪತ್ಯವನ್ನು ಮನ್ನಿಸಿದ ಇಂದಿರಾಗಾಂಧಿ ಕೆಲವೇ ದಿನಗಳಲ್ಲಿ ಅವರ ಮಾರ್ಗದರ್ಶನವನ್ನು ತಿರಸ್ಕರಿಸಿದಳು ಮಾತ್ರವಲ್ಲ, ಅಲ್ಲಿಯವರೆಗೆ ಕಾಂಗ್ರೆಸ್ ಸಂಸ್ಥೆ ಅನುಸರಿಸಿಕೊಂಡು ಬಂದಿದ್ದ ಸೈದ್ಧಾಂತಿಕ ಸಂಗತಿಗಳನ್ನು ಗಾಳಿಗೆ ತೂರಿ ಆ ಪಕ್ಷವನ್ನೇ ಒಡೆದಳು, ತನ್ನ ಖುರ್ಚಿ ಭದ್ರ ಮಾಡಿಕೊಳ್ಳಲು ಕೆಲವು ಪೊಳ್ಳು ಘೋಷಣೆಗಳನ್ನು ಕೊಟ್ಟಳು. ಗರೀಬ ಹಟಾವೋ ಅಂಥವುಗಳಲ್ಲೊಂದು. ಗರೀಬಿ ಹಟಾವೋ ಮಾಡುವುದಕ್ಕೆ ಪ್ರತಿಗಾಮಿ ಶಕ್ತಿಗಳು ಅಡ್ಡಿಯಾಗಿವೆಯೆಂದು ಕೂಗೆಬ್ಬಿಸಿದಳು. ಆಗ ಜನರ ಮನಸ್ಸಿನಲ್ಲಿ ಹೊಸ ಬದಲಾವಣೆಯ ಆಸೆ ಉದಯವಾಯಿತೇನೋ ನಿಜ! ಆದರೆ ಅದು ಭ್ರಮ ನಿರಸನವಾಗುವುದಕ್ಕೆ ಬಹಳ ದಿನ ಹಿಡಿಯಲಿಲ್ಲ. ಆಗ ಅವರು ಅನಿವಾರ್ಯವಾಗಿ ತುರ್ತು ಪರಿಸ್ಥಿತಿಯನ್ನು ಹೇರಬೇಕಾಯಿತು. ತನ್ನ ಸುಮಾರು ಒಂದು ಲಕ್ಷ ಜನ ವಿರೋಧಿಗಳನ್ನು ಸೆರೆಮನೆಗೆ ತಳ್ಳಿದರು. ಹೀಗೆ ಮಾಡುವಾಗ ಅವರಿಗೆ

ೇವಲ ವೈಯಕ್ತಿಕ ಶ್ರದ್ಧೆ ಇತ್ತೇ ಹೊರತು, ದ್ಧಾಂತಿಕವಾದ ಅಥವಾ ಜನಶ್ರೇಯೋಭಿ ದ್ಧಿ ಯಾವ ಕಾರಣಗಳಿರಲಿಲ್ಲ. ಇದು ೂತ್ತಾಗಲೂ ಬಹಳ ಕಾಲ ಹಿಡಿಯಲಿಲ್ಲ. ಸಂದರ್ಭದಲ್ಲಿ ನಡೆದ ಚುನಾವಣೆಯಲ್ಲಿ ಈ ರೀಬಿ ಹಟಾವೋ ಘೋಷಣೆ ಮಾಡಿದ ಾಮ್ರಾಜ್ಞಿಯನ್ನೇ ಜನ ತಿರಸ್ಕರಿಸಿದರು. ಆಗ ಅವರು ಅನೇಕ ವಕ್ರ ಮಾರ್ಗಗಳನ್ನು ಆರಂಭಿ ದರು. ಇದರಿಂದಾಗಿ ಜೀವನ ಮೌಲ್ಯಗಳು ಸಿದುಬಿದ್ದವು. ಜನತೆ ಕೂಡ ಸರಿ ತಪ್ಪುಗಳ ಡುವಿನ ವ್ಯತ್ಯಾಸ ಗುರುತಿಸುವುದನ್ನು ಬಿಟ್ಟರು. ಅಥವಾ ಅಂಥ ಮರವೆ ಬಂತು. ವೈಯಕ್ತಿಕತೆ ಯಾವುದು ? ಸಿದ್ಧಾಂತ ಯಾವುದು ? ಎಂಬುದು ತಿಳಿಯದೆ ಹೋಯಿತು, ಇಂದಿರಾ ಗಾಂಧಿ ಮತ್ತೆ ಪ್ರಧಾನಿಯಾದರು. ಆಮೇಲಿನ ವಿದ್ಯಮಾನಗಳು ಎಲ್ಲರಿಗೂ ತಿಳಿದೇ ಇವೆ,



ಇದನ್ನು ಇಷ್ಟೊಂದು ವಿವರವಾಗಿ ತಿಳಿ ಸುವ ಉದ್ದೇಶವಿಷ್ಟೆ : ಈಗ ನಮ್ಮೆದುರು ಇರುವ ನಾಯಕರಲ್ಲಿ ಬಹಳಷ್ಟು ಜನರು ಈ ವಿಷಯದಲ್ಲಿ ಶ್ರೀಮತಿ ಇಂದಿರಾಗಾಂಧಿಯವ ರನ್ನೂ ಹಿಂದೆ ಸರಿಸಬಲ್ಲರೇನೋ ಎನಿಸುತ್ತದೆ. ವೈಯಕ್ತಿಕ ರಾಜಕಾರಣ ಅಥವಾ ಸ್ಥಾನಮಾನ ಗಳಿಕೆಗೆಯ ಹುನ್ನಾರವೇ ಮುಖ್ಯವಾಗಿ ದೇಶದ ಹಿತಚಿಂತನೆಯ ರಾಜಕಾರಣ ಕಾಣೆಯಾಗಿದೆ. ಒಬ್ಬೊಬ್ಬರನ್ನು ಕಣ್ಣೆದುರು ತಕ್ಕೊಂಡು ನೋಡಿದರೂ ಅವರೆಲ್ಲ ಒಂದೇ ವಸ್ತುವಿ ನಿಂದಾದ ಮಾದರಿಗಳೆಂಬಂತೆ ಕಾಣಿಸುತ್ತದೆ,

ರಾಜೀವ ಗಾಂಧಿಯ ವಿಷಯ ಎಲ್ಲರಿಗೂ ಗೊತ್ತಿರುವುದರಿಂದ ಅವರ ಬಗ್ಗೆ ಹೆಚ್ಚು ವಿವರಿಸುವುದು ಅಗತ್ಯವಿಲ್ಲ ಎನಿಸುತ್ತದೆ. ಅವರ ಬೋಫೋರ್ಸ್ ಹಗರಣ ಜಗದ್ ವಿಖ್ಯಾತ ವಾಯಿತಾದರೂ ಅದು ದೇಶದ್ರೋಹದ ಕೆಲಸ ವೆಂದು ಯಾರೂ ಪರಿಗಣಿಸಲಿಲ್ಲ. ದೇಶ ರಕ್ಷಣೆಗೆ ನಮ್ಮ ವೀರಯೋಧರು ಬಳಸಬಹುದಾದ ಯುದ್ಧ ಸಾಮಗ್ರಿಗಳನ್ನೇ ಕಮಿಶನ್ ಆಸೆಗಾಗಿ ಕಳಪೆ ಸಾಮಗ್ರಿಗಳನ್ನು ಖರೀದಿಸಿದವರು ಎಂಥವರಿರಬೇಕು ? ಅಂಥ ಕಳಪೆ ಸಾಮಗ್ರಿ ಯನ್ನು ಬಳಸುವ ಯೋಧರಿಂದ ಸರಿಯಾದ ಹೋರಾಟ ಆಗಬಹುದೆ ? ಅವರು ಉಪ ಯೋಗಿಸುವ ಕಳಪೆ ಬಂದೂಕು ಆಯುತ ಸಮ ಯಕ್ಕೆ ಕೈಕೊಟ್ಟರೆ ಏನು ಮಾಡುವುದು ? ಗುಂಡು ಹಾರಿದರೂ, ಆ ಕಳಪೆ ಗುಂಡು ವೈರಿ ಎದೆಯಲ್ಲಿ ಹೊಗದಿದ್ದರೆ ಆ ಗುಂಡುಗಳನ್ನು ಏನು ಮಾಡುವುದು ? ಇದು ಒಂದು ರೀತಿ ತಾಯಿಯ ಮೊಲೆಹಾಲೇ ನಂಜಾಗಿ ಕೊಂದತೆ, ಇಂಥದನ್ನು ರಾಜೀವ್ ಗಾಂಧಿ ಎಗ್ಗಿಲ್ಲದೆ ಮಾಡಿದರು.

ಇದನ್ನು ಪತ್ತೆ ಮಾಡಿ ಸಂಬಂಧಿಸಿದ ವ್ಯಕ್ತಿ ಎಷ್ಟೇ ದೊಡ್ಡವನಾದರೂ ಆ ವ್ಯಕ್ತಿಗೆ ಶಿಕ್ಷೆ ವಿಧಿಸುತ್ತೇನೆ ಎಂಬ ಘೋಷಣೆಯೊಂದಿಗೆ ಅಬ್ಬರಿಸುತ್ತ ಅಧಿಕಾರಕ್ಕೆ ಬಂದ ವಿ.ಪಿ.ಸಿಂಗ್‌ರು

ತಮ್ಮ 16 ತಿಂಗಳ ಅವಧಿಯಲ್ಲಿ ಬೋಫೋರ್ಸ್ ಬಗ್ಗೆ ಕಿರುಬೆರಳನ್ನೂ ಎತ್ತಲಿಲ್ಲ. ಬದಲಿಗೆ ಹಿಂದುಳಿದವರಿಗೆ ಮೀಸಲಾತಿ ನೀಡುತ್ತೇನೆ. ಎಂಬ ಮತ್ತೊಂದು ಸ್ಲೋಗನ್ ಎತ್ತಿದರು. ಮಂಡಲ ಆಯೋಗ ಜಾರಿಗೆ ತರಲಾಗುವುದು ಎಂದು ಸಾರಿದರು. ಇದರಿಂದ ಮೇಲ್ಜಾತಿ, ಕೆಳಜಾತಿಯ ಜನಗಳ ನಡುವೆ ಅಪಾರ ಸಂಘರ್ಷ ತಂದರು. ಅನೇಕ ಸಾವು ನೋವುಗಳಾದವು. ಆದರೆ ಇದೆಲ್ಲದರ ಒಟ್ಟು ಪರಿಣಾಮವೇನು ಗೊತ್ತೆ ? ಈ ಮಂಡಲ ವರದಿ ಜಾರಿಗೆ ಬಂದರೆ ಕೇಂದ್ರದಲ್ಲಿ ಕೇವಲ 2000 ಹುದ್ದೆಗಳು ಮಾತ್ರ ಕೆಳ ವರ್ಗದವರಿಗೆ ತಲುಪುತ್ತವೆ. ಎಂಭತ್ನಾಲ್ಕು ಕೋಟಿ ಜನಸಂಖ್ಯೆಯಲ್ಲಿ ಕೇವಲ ಎರಡು



ಸಾವಿರ ಜನರ ಹಿತಕ್ಕಾಗಿ ಈ ಹಾಹಾಕಾರವೆ ? ಅನೇಕ ಶತಮಾನಗಳಿಂದ ಕೆಳವರ್ಗದವರಿಗೆ ನ್ಯಾಯ ಸಿಕ್ಕಿಲ್ಲ. ಅದನ್ನು ತಂದುಕೊಡುವುದು ಅಗತ್ಯ ಎಂಬ ವಿ. ಪಿ. ಸಿಂಗ್‌ರ ಮಾತು ನ್ಯಾಯ ವಾದುದೇ ಆಗಿದೆ. ಅದನ್ನು ಜಾರಿಗೊಳಿಸು ವುದು ಇಂದಿಲ್ಲಾ ನಾಳೆಯಾದರೂ ಆಗಬೇಕಾ ದುದೇ. ಆದರೆ ಪ್ರಜಾತಂತ್ರ ಆಡಳಿತದ ಶಿಸ್ತುಬದ್ಧ ವ್ಯವಸ್ಥೆಯಲ್ಲಿ ಅದನ್ನು ಜಾರಿ ಗೊಳಿಸುವುದು ಅಷ್ಟೊಂದು ಸುಲಭವಲ್ಲ. ಗಣಪತಿಯನ್ನು ಮಾಡಹೋದರೆ ಕೋಡ[illegible] ವಾಯಿತು ಎಂದು ಹೇಳುವಂತೆ ಇವರು ತಮ್ಮ ರಾಜಕೀಯ ವೈಯಕ್ತಿಕತೆಗಾಗಿ ಆಡುವ ಮಾತು ಗಳು ಇಡೀ ದೇಶವನ್ನು ಎರಡು ಭಾಗ ಮಾಡು ತ್ತವೆ. ಮೇಲ್ಜಾತಿ, ಕೆಳಜಾತಿ ಎಂಬ ಕೀಳು ಸಂಘರ್ಷ ಶುರುವಾಗುತ್ತದೆ, ಒಮ್ಮೆ ಈ ಜಾತಿ ಜಗಳ ಶುರುವಾಯಿತೆಂದರೆ ಅದಕ್ಕೆ ಮುಕ್ತಾ ಯವೇ ಇಲ್ಲ. ನಾವು ಮೊದಲು ಈ ದೇಶದ ಜಾತಿಗಳನ್ನು ನಾಶಗೊಳಿಸಬೇಕಿದೆ. ವಿ. ಪಿ. ಸಿಂಗ್‌ರಿಂದ ಅದು ಈಗ ಮತ್ತೆ ಭೂತಾಕಾರ ವಾಗಿ ಎದ್ದು ನಿಂತಿದೆ. ಭವಿಷ್ಯ ಭಾರತದ ದೃಷ್ಟಿಯಿಂದ ಇದು ತುಂಬಾ ಅಪಾಯಕಾರಿ ಯಾದುದು.

ಇದರ ಇನ್ನೊಂದು ವಿಸ್ತೃತ ರೂಪ ದಂತಿರುವ ಬಿ.ಜೆ.ಪಿ. ಯ ಎಲ್. ಕೆ. ಅದ್ವಾನಿ ಯವರ ರಾಮ ರಥಯಾತ್ರೆ ಚಲಿಸಿದಲ್ಲೆಲ್ಲ, ಆ ಮಾರ್ಗದ ಉದ್ದಕ್ಕೂ ರಕ್ತ ಚೆಲ್ಲಾಡಿದೆ. ಹಿಂದು ಮುಸ್ಲಿಂ ಕೋಮುವಾದದ ದಳ್ಳುರಿ ಈಗ ನಗರ ಗಳಿಂದ ಗ್ರಾಮಾಂತರ ಪ್ರದೇಶಕ್ಕೂ ತನ್ನ ಕೆನ್ನಾಲಿಗೆ ಚಾಚಿದೆ. ಇದರಿಂದ ಈಗ ಅದ್ವಾನಿ ಯವರು ಭಾರತೀಯ ಜನತಾ ಪಕ್ಷದ ವಿಜಯ ವನ್ನು ಸಾಧಿಸಬಹುದು. ಹಿಂದುತ್ವದ ಪುನರು ತ್ಥಾನ ಮಾಡಿದ್ದೇವೆಂದು ಹೇಳಿಕೊಳ್ಳಬಹುದು. ಆದರೆ ಇಷ್ಟು ದಿನ ಸೀಸೆಯೊಳಗೆ ಹಿಡಿದಿಟ್ಟಿದ್ದ ಕೋಮು ಭಾವನೆಯ ದೆವ್ವವನ್ನು ಅವರು ಅದರ ಮುಚ್ಚಳ ತೆಗೆಯುವ ಮೂಲಕ ಹೊರಗೆ ಬಿಟ್ಟಿದ್ದಾರೆ ಎನ್ನುವುದನ್ನು ಮರೆಯಲಿಕ್ಕಾಗದು. ಈ ಮತೀಯ ದೆವ್ವ ಯಾವ ಹೊತ್ತಿಗೆ ಯಾರ ಕುತ್ತಿಗೆಯನ್ನು ತಕ್ಕೊಳ್ಳುವುದೋ ಹೇಳ ಲಿಕ್ಕಾಗದು. ಜಾತ್ಯಾತೀತ ತತ್ವ ನಮ್ಮ ಪ್ರಜಾ ತಂತ್ರದ ಬಹು ಮುಖ್ಯ ಚೈತನ್ಯ. ಈಗ ಈ ಚೈತನ್ಯಕ್ಕೆ ಕೊಡಲಿ ಏಟು ಬೀಳತೊಡಗಿದೆ.

ಇನ್ನು ದೇವಿಲಾಲ್ – ಚಂದ್ರಶೇಖರ ಗುಂಪಂತೂ ಸಂಪೂರ್ಣ ಸ್ವಾರ್ಥ ರಾಜಕೀಯಕ್ಕೆ ಸೇರಿದ್ದು. ದೇವಿಲಾಲ್‌ರಿಗೆ ತಾವೂ ತಮ್ಮ ಮಗ ಮೊಮ್ಮಕ್ಕಳಿಗಾಗಿಯೇ ಈ ದೇಶ ಇರೋದು ಎಂಬ ಹಟವಿದ್ದರೆ, ಚಂದ್ರಶೇಖರ್‌ರಿಗೆ ತಾನು ಅಧಿಕಾರದಲ್ಲಿರುವುದಾದರೆ ಯಾರೊಂದಿಗಾದರೂ ಕೈಕೂಡಿಸಬಲ್ಲೆ. ಮತ್ತು ಅದೇ ವೇಳೆಗೆ ಎಂಥವರ ಬೆನ್ನಲ್ಲಾದರೂ ಚೂರಿ ಹಾಕಬಲ್ಲೆ ಎಂಬ ಹುನ್ನಾರಗಳಿವೆ.

ಈ ಪರಿಯ ರಾಜಕೀಯ ಹುನ್ನಾರಗಳು, ಎಂಥ ಶ್ರೀಮಂತ ರಾಷ್ಟ್ರವನ್ನಾದರೂ ತಿಂದು ಹಾಕುತ್ತೇವೆ. ಅದರಲ್ಲೂ ಹೆಜ್ಜೆ ಹೆಜ್ಜೆಗೆ ಬಡತನ ಹಾಗೂ ಅವಕಾಶ ವಿಹೀನತೆಗಳು ತುಂಬಿ ತುಳುಕುತ್ತಿರುವ ಭಾರತವನ್ನು ಇವು ಯಾವ ಪಾತಾಳಕ್ಕೆ ತಲುಪಿಸುತ್ತವೆಯೋ ಹೇಳಲಿಕ್ಕಾಗದು.



ಇನ್ನು ಮುಂದೆ ಯಾರೇ ಅಧಿಕಾರಕ್ಕೆ ಬರಲಿ, ದಿನದಿಂದ ದಿನಕ್ಕೆ ಅವರವರ ಸ್ವಾರ್ಥ ರಾಜಕೀಯವೇ ಮೇಲೆದ್ದು ಕುಣಿಯೋದು ಗಟ್ಟಿ. ಇಂಥ ಸ್ವಾರ್ಥದಿಂದ ದೇಶಕ್ಕೆ ಯಾವ ಅಪಾಯವಾದೀತು ಎಂಬುದು ಈಗ ಯಾರ ಲಕ್ಷ್ಯದಲ್ಲಿಯೂ ಇಲ್ಲ. ತನ್ನನ್ನು ಚುನಾಯಿಸಿ ಕಳಿಸಿದ ಪಕ್ಷವನ್ನೇ ಲೆಕ್ಕಕ್ಕೆ ತಾರದವರು ದೇಶವನ್ನು ಇನ್ನೆಲ್ಲಿ ಲೆಕ್ಕಕ್ಕೆ ತಂದಾರು ?

ಈ ಮಥನದಲ್ಲಿ ಈಗ ಮೊದಲು ಹುಟ್ಟಿರೋದು ನಂಜು; ಅಮೃತ ಯಾವಾಗ ಹುಟ್ಟುತ್ತದೋ ಯಾರು ಬಲ್ಲರು ? ಅಲ್ಲಿಯವರೆಗೆ ಈ ನಂಜನ್ನು ಯಾರು ನುಂಗಬಲ್ಲರು ? ಹತ್ತನೆಯ ಲೋಕಸಭೆಗೆ ಈ ತಾಕತ್ತು ಇದೆಯೇ ? ಬಹುಶಃ ಅದು ಮತ್ತಷ್ಟು ಆವಾಂತರಕಾರಿಯಾಗಬಹುದೇನೊ !

● ರಾಜಕಾರಣಿ

---

# ಕಲ್ಬುರ್ಗಿ ಕಣದಲ್ಲಿ ಜಂಗಿ ಕುಸ್ತಿ



ಡಾ. ಬಿ. ಜಿ. ಜವಳಿ

ಬಂಗಾಳ ಕೊಲ್ಲಿಯಲ್ಲಿ ಕಾಣಿಸಿಕೊಂಡ ಚಂಡಮಾರುತದ ಪರಿಣಾಮವಾಗಿ ಕಲ್ಬುರ್ಗಿ ಜಿಲ್ಲೆಯ ಕೆಲವು ಕಡೆ ಅಲ್ಲಿಷ್ಟು ಇಲ್ಲಿಷ್ಟು ಮಳೆ ಬಿದ್ದು ವಾತಾವರಣದಲ್ಲಿ ಕೊಂಚ ತಂಪು ಉಂಟಾಗಿದೆ. ಇದರಿಂದ ಜನರು ಬಿಸಿಲಿನಿಂದ ತಪ್ಪಿಸಿಕೊಂಡೆವು ಎಂಬ ಉತ್ಸಾಹದಲ್ಲಿದ್ದಾರೆ. ಆದರೆಅವರ ಉತ್ಸಾಹಬಹಳ ಹೊತ್ತು ಉಳಿಯಲಾರದು. ಏಕೆಂದರೆ ದಿಲ್ಲಿಯಲ್ಲಿ ಬೀಸಿದ ರಾಜಕೀಯ ಚಂಡ ಮಾರುತದ ಕಾರಣದಿಂದ, ಮುಂದಿನ ಇಪ್ಪತ್ತೈದು ದಿನಗಳಲ್ಲಿ ಚುನಾವಣೆಯ ಬಿಸಿ ಕೂಡ ಅವರಿಗೆ ತಾಗಲಿದೆ,

ಕಲ್ಬುರ್ಗಿ ಮತಕ್ಷೇತ್ರದಲ್ಲಿ ಒಟ್ಟು ಎಂಟು ಲಕ್ಷ ಮತದಾರರಿದ್ದು ಅವರಲ್ಲಿ ಅರ್ಧದಷ್ಟು ಮತದಾರರು ಲಿಂಗಾಯತರು. ಎರಡನೆಯ ಸ್ಥಾನ ಮುಸಲ್ಮಾನರದು. ನಂತರ ಪರಿಶಿಷ್ಟ ಜಾತಿ ಮತ್ತು ಜನಾಂಗದ್ದು. ಹಿಂದುಳಿದ ಕಬ್ಬಲಿಗ ಕುರುಬರೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಈ ಮುಂಚೆ ಇಲ್ಲಿ ನಡೆದ ಎಲ್ಲ ಲೋಕಸಭಾ ಚುನಾವಣೆಗಳಲ್ಲೂ ಜಾತಿಗಿಂತ ಪಕ್ಷವೇ ಪ್ರಾಬಲ್ಯ ಪಡೆದಿರುವುದರಿಂದ ಜಾತಿ ಆಧಾರದ ವಿಶ್ಲೇಷಣೆ ಇಲ್ಲಿ ಅಸಗತ್ಯ. ಸುರಪುರ ಯಾದಗಿರಿ, ಶಹಾಪುರ, ಆಳಂದ ಹಾಗೂ ಕಮಲಾಪುರಗಳನ್ನು ಹೊರತುಪಡಿಸಿ, ಜಿಲ್ಲೆಯ ಉಳಿದೆಲ್ಲ ತಾಲೂಕುಗಳು ಕಲ್ಬುರ್ಗಿ ಮತಕ್ಷೇತ್ರದ ಕಕ್ಷೆಯಲ್ಲಿ ಬರುತ್ತವೆ.

ಈಗ ಇಲ್ಲಿ ಕಾಂಗ್ರೆದಿಂದ ಡಾ. ಬಿ. ಜಿ. ಜವಳಿ, ಜನತಾದಳ ಹಾಗೂ ಸಮಾಜವಾದಿ ಜನತಾಪಕ್ಷದಿಂದ ವೈಜನಾಥ್ ಪಾಟೀಲ್, ಹಾಗೂ ಬಿಜೆಪಿ ಯಿಂದ ಬಸವರಾಜ ಪಾಟೀಲ್ ಸೇಡಂ ಅವರು ಕಣಕ್ಕೆ ಇಳಿದಿದ್ದಾರೆ. ಈ ಕ್ಷೇತ್ರದಲ್ಲಿ ಆರಂಭದಿಂದಲೂ ಕಾಂಗ್ರೆಸ್ ಪಕ್ಷವೇ ಗೆದ್ದುಕೊಂಡು ಬಂದಿದೆ. ಆದ್ದರಿಂದಲೇ ಶತಾಯ ಶತಾಯ [ಹೋರಾಡಿ ಡಾ. ಜವಳಿ ಟಿಕೆಟ್ ಗಿಟ್ಟಿಸಿಕೊಂಡುಬಂದಿದ್ದಾರೆ. ಸಾಲದ್ದಕ್ಕೆ ಅವರಿಗೆ ಕಳೆದಸಲ ಇದೇ ಕ್ಷೇತ್ರದಿಂದ ಗೆದ್ದು ಹೋದ ಹಮ್ಮು ಬೇರೆ ಇದೆ.

ಆದರೆ ಈ ಬಾರಿಯ ಚುನಾವಣೆ ಗತಾನುಗತಿಕ ರೀತಿಯಲ್ಲಿ ನಡೆಯಲಿಕ್ಕಿಲ್ಲ. ಏಕೆಂದರೆ ಡಾ. ಜವಳಿ ವೀರೇಂದ್ರ ಪಾಟೀಲರ ಅಳಿಯರೆಂದೇ ಹೆಚ್ಚು ಪರಿಚಿತರು. ವೀರೇಂದ್ರರನ್ನು ಬೆಂಬಲಿಸಿದ್ದ ಮತದಾರರು ಆಗ ಡಾ. ಜವಳಿಯನ್ನು ಬೆಂಬಲಿಸಿದ್ದರು. ಆದರೆ ಈಗ ಮಾವ ವೀರೇಂದ್ರ ಪಾಟೀಲ್ ಚುನಾವಣಾ ಪ್ರಚಾರಕ್ಕೆ ಬರುವಂತಿಲ್ಲ. ವಿದೇಶಕ್ಕೆ ಹೋಗಿದ್ದಾರೆ. ಹೀಗಾಗಿ ಡಾ. ಜವಳಿ ಈ ಬಾರಿ ತಮ್ಮ ವೈಯಕ್ತಿಕ ವರ್ಚಸ್ಸಿನಿಂದಲೇ ಗೆದ್ದು ಬರ

ಬೇಕು. ಹಾಗೆ ನೋಡಿದರೆ ಈ ಜವಳಿಯವರಿಗೆ ರಾಜಕೀಯದ ಯಾವ ಹಿನ್ನೆಲೆಯೂ ಇಲ್ಲ. ಹೈದ್ರಾಬಾದ್ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ಜವಳಿ ಮಾಡಿರುವ ಅವಾಂತರಗಳು ಲೆಕ್ಕವಿಲ್ಲ ದಷ್ಟಿವೆ. ಅವರು ಹೈದ್ರಾಬಾದ್ ಶಿಕ್ಷಣ ಸಂಸ್ಥೆ ಯನ್ನು ದೊಡ್ಡ ವ್ಯಾಪಾರೋದ್ಯಮದ ಕೇಂದ್ರ ವನ್ನಾಗಿ ಮಾಡಿದ್ದಾರೆ. ಅಲ್ಲಿ ಹಣದ ಝಣ ತ್ಕಾರ ಬಿಟ್ಟರೆ ಬೇರೆ ಇನ್ನೇನೂ ಕಳೆಸುವು ದಿಲ್ಲ. ಆ ಮೂಲಕ ಡಾ. ಜವಳಿ ಸಂಪಾದಿಸಿದ ಆಸ್ತಿ ಪಾಸ್ತಿ ಪುಂತಾದುವನ್ನು ಯಾರು ತಾನೆ ವಿಚಾರ ಮಾಡುತ್ತಾರೆ? ಇವರಿಗೆ ಲೋಕಸಭಾ ಸ್ಥಾನ ಬೇಕಿರುವುದು ದಿಲ್ಲಿಗೆ ಓಡಾಡಿಕೊಂಡಿ ರುವುದಕ್ಕೆ: ಹಾಗೂ ತಮ್ಮ ವ್ಯಾಪಾರೋದ್ಯಮ ವನ್ನು ಯಾವ ಆತಂಕವಿಲ್ಲದೆ ಪೂರೈಸಿಕೊಳ್ಳು ವುದಕ್ಕೇ ಹೊರತು ಈ ಕ್ಷೇತ್ರದ ಪ್ರತಿನಿಧಿ ಯಾಗಿ ಯಾವ ಸೇವೆಯನ್ನೂ ಅವರು ಮಾಡ ಲಿಕ್ಕೆ ಅಲ್ಲ. ಸ್ವಭಾವತಃ ಐಷಾರಾಮಿಯಾದ, ಬಂಡವಾಳಿಗರಾದ ಜವಳಿಯವರಿಗೆ, ಹೈ. ಕ. ಶಿ, ಸಂ. ಅಧ್ಯಕ್ಷ ಸ್ಥಾನ ಒಂದು ಏಣಿಯಾದರೆ, ಈ ಲೋಕಸಭಾ ಸ್ಥಾನ ಆ ಏಣಿಯ ಮೂಲಕ ಏರಿ ಹೋಗಬೇಕಿರುವ ಮಾಳಿಗೆ.

ಜನತಾದಳ ಮತ್ತು ಸಮಾಜವಾದಿ ಪಕ್ಷದ ಅಭ್ಯರ್ಥಿ ವೈಜನಾಥ ಪಾಟೀಲ ಹಾಗಲ್ಲ. ಡಾ. ಜವಳಿ ಹಾಗೂ ವೈಜನಾಥ ಪಾಟೀಲ ಒಂದೇ ಕೋಮಿನವರು ಮಾತ್ರವಲ್ಲ; ಹತ್ತಿರದ ಸಂಬಂಧಿ ಗಳು ಕೂಡ. ಆದರೇನು ? ಸ್ವಭಾವದಲ್ಲಿ ಅಜಗಜಾಂತರ ವ್ಯತ್ಯಾಸ. ವೈಜನಾಥ ಪಾಟೀಲ ರಿಗೆ ಯಾವ ಮಾವ ಇಲ್ಲ. ಅಷ್ಟೇಕೆ ? ಇದೇ ಜವಳಿಯವರ ಮಾವ ವೀರೇಂದ್ರರ ವಿರುದ್ಧವೇ ಕಳೆದ ವಿಧಾನ ಸಭೆಯಲ್ಲಿ ಸಡ್ಡು ಹೊಡೆದು ನಿಂತ ವ್ಯಕ್ತಿ. ಕೆಲವೇ ಮತಗಳ ಅಂತರದಲ್ಲಿ ಹಿಂದೆ ಬಿದ್ದ ವ್ಯಕ್ತಿ. ನಲವತ್ತು ವರ್ಷಗಳ ರಾಜಕೀಯ ಹೋರಾಟ ಇರುವ ಈ ವ್ಯಕ್ತಿಗೆ ರಾಜಕೀಯ ಪಟ್ಟುಗಳೆಲ್ಲ ಗೊತ್ತು. ಅಧಿಕಾರ ಗ್ರಹಣಕ್ಕಾಗಿ ಅಭಿಪ್ರಾಯ ಮಾರಿಕೊಳ್ಳುವ ಇಂದಿನ ಎಷ್ಟೋ ರಾಜಕಾರಣಿಗಳ ನಡುವೆ ಈ ವೈಜನಾಥ ಅಪರೂಪದ ವ್ಯಕ್ತಿ ಕೂಡ. ಹೈದ್ರಾಬಾದ್ ಕರ್ನಾಟಕದ ಅಭಿವೃದ್ಧಿ ಕುಂಠಿತ ಗೊಳ್ಳುತ್ತದೆ ಎಂಬ ಕಾರಣಕ್ಕಾಗಿ ಮಂತ್ರಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಹೊರ ಬಂದ ಛಲಗಾರ ಇವರು.



ವೈಜನಾಥ ಪಾಟೀಲ

ಜನತೆಯ ಬೇಕು ಬೇಡಗಳನ್ನೆಲ್ಲ ಸರಿ ಯಾಗಿ ತಿಳಿದ ವೈಜನಾಥ್ ಗೆದ್ದರೆ ಲೋಕಸಭಾ ಸ್ಥಾನಕ್ಕೆ ಒಂದು ಅರ್ಥ ಬರುತ್ತದೆ. ಆದರೆ ಇವರ ಸೋಲು ಗೆಲುವು ಆ ಪಕ್ಷದ ಕಾರ್ಯಕರ್ತ ರನ್ನು ಅವಲಂಬಿಸಿದೆ. ಅದೇನು ಕಾರಣವೋ ಜನತಾದಳದ ಎಸ್. ಕೆ. ಕಾಂತಾರ ಅಪಸ್ವರ ಕೇಳಿ ಬಂತು ಇದು ಅಪರೋಕ್ಷವಾಗಿ ಕಾಂಗ್ರೆಸ್ಗೆ ಸಹಾಯವಾಗಬಹುದಾಗಿದೆ. ಆದ್ದ ರಿಂದ ಪಕ್ಷದ ಒಳಗಡೆ ಏನೇ ನಡೆದರೂ, ಹೊರ ಗಡೆ ಪಕ್ಷದ ಹಿತದೃಷ್ಟಿಯಿಂದ ಈ ಕಾಂತಾ

ಕೂಡ ಒಂದಾಗಿ ನಿಂತು ಕೆಲಸ ಮಾಡುವುದು ಅಗತ್ಯ.ಒಂದಾಗಿ ಕೆಲಸ ಮಾಡಿದರೆ ಪವಾಡವೇ ಉಂಟಾಗಬಹುದು.

ಭಾಜಪದಿಂದ ಸ್ಪರ್ಧಿಸಿರುವ ಬಸವರಾಜ ಪಾಟೀಲ ಸೇಡಂ ಕೂಡ ಸೂಕ್ತ ಅಭ್ಯರ್ಥಿಯೇ. ಒಳ್ಳೆಯ ಕೆಲಸಗಾರ ಹಾಗೂ ಉತ್ತಮ ಚಾರಿತ್ರ್ಯ ಪಡೆದಿರುವ ವ್ಯಕ್ತಿ. ಈತ ಗೆದ್ದು ಬಂದರೂ ಒಳ್ಳೆಯದೇ. ಆದರೆ ಈತನನ್ನು ಗೆಲ್ಲಿಸಿದರೆ, ರಾಮರಥದ ಮೂಲಕ ಕೋಮು ಮನೋಭಾವನೆ ಹುಟ್ಟುಹಾಕಿದ ಸಂಗತಿಗಳಿಗೆ ಗೆಲುವು ತಂದಂತೆ ಆಗುತ್ತದೆ. ಸಾಲದ್ದಕ್ಕೆ ಈತ ಸಧ್ಯದ ವಿಧಾನ ಸಭಾ ಸದಸ್ಯನಾಗಿದ್ದಾನೆ. ಅಂದಂತೆ ಈತನ ಸ್ಪರ್ಧೆ ಸಾಂಕೇತಿಕವೇ ಆಗಿದೆ ಯಾವರೂ ವೈಜನಾಥ ಪಾಟೀಲರ ಮತಗಳನ್ನು ಕಸಗೊಳ್ಳುವ ಸಾಧ್ಯತೆಗಳಿವೆ.

ಹೀಗೆಲ್ಲ ಆಗಿ ಬೇಡದ ವ್ಯಕ್ತಿ ಕಾಂಗ್ರೆ... ಡಾ. ಜವಳಿಯವರೇ ಗೆಲ್ಲುವ ಸೂಚನೆಗಳ... ಆದರೆ ಇದು ಆಗಬಾರದು.



ಬಸವರಾಜ ಪಾಟೀಲ



## ● ಕವಡು ಕಂಟುಕ ಕೂಪನ್

ಶ್ರೀ ................................

................................

................................

● ಈ ಲೆಕ್ಕಗಳಿಗೆ ಉತ್ತರ ಕಳಿಸುವವರು ಈ... ಕೂಪನ್ ಕತ್ತರಿಸಿ, ಅದರಲ್ಲಿ ಸರಿಯಾ... ವಿಳಾಸ ಬರೆದು ಕಳಿಸಬೇಕು. ನಿಮ್ಮ... ಉತ್ತರ ಪ್ರತಿ ತಿಂಗಳ 25ಕ್ಕೆ ತಲುಪ... ವಂತಾಗಬೇಕು.

# ಬಾಗಲಕೋಟೆಗೆ ವಕ್ಕರಿಸಿದ ಗುಳ್ಳೆನರಿ ಹೆಗಡೆ



ಗುಳ್ಳೆನರಿ · ಎಂದೇ ಸುವಿಖ್ಯಾತರಾದ ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಈಗ ಬಾಗಲ್ಕೋಟೆಗೆ ಬಂದು ವಕ್ಕರಿಸಿದ್ದಾರೆ. ಅವರಿಗೆ ಇದೇರೀತಿ ಮೂರ್ನಾಲು ಕಡೆ ಆಹ್ವಾನ ಬಂದಿತ್ತು. ಆದರೆ ಅವರು ಬಾಗಲ್ಕೋಟೆ ತಮಗೆ ಅತ್ಯಂತ ಸುರಕ್ಷಿತ ಕ್ಷೇತ್ರ ಎಂದು ಭಾವಿಸಿಕೊಂಡಿದ್ದಾರೆ.

ನಿಜವಾದ ವಿದ್ಯಮಾನವೇನೆಂದರೆ, ಹೆಗಡೆಗೆ ಇಲ್ಲಿ ಸುಲಭ ಜಯ ಸಿಕ್ಕುವುದಿಲ್ಲ. ಏಕೆಂದರೆ ಇವರೊಂದಿಗೆ ಪ್ರತಿಸ್ಪರ್ಧಿಯಾಗಿ ಸೆಣಸಲಿರುವ ಕಾಂಗ್ರೆಸ್‌ನ ಸಿದ್ದು ನ್ಯಾಮಗೌಡ ಸಾಮಾನ್ಯ ವ್ಯಕ್ತಿ ಅಲ್ಲ. ಇತ್ತೀಚಿನ ಮೂರ್ನಾಲ್ಕು ವರ್ಷಗಳಲ್ಲಿ ಈ ಸಿದ್ದು ನ್ಯಾಮಗೌಡ ಈ ಭಾಗದಲ್ಲಿ ಅತ್ಯದ್ಭುತವಾದ ಕೆಲಸವೊಂದನ್ನು ಮಾಡಿದ್ದಾರೆ. ಚಿಕ್ಕ ಪಡಸಲಿಗಿಯ ಹತ್ತಿರ ಕೃಷ್ಣಾ ನದಿಗೆ ಅಡ್ಡ ಲಾಗಿ ಒಂದು ಆಣೆಕಟ್ಟನ್ನೇ ಕಟ್ಟಿ ಆ ಮೂಲಕ ಮೂವತ್ತುಸಾವಿರ ಎಕರೆ ಜಮೀನಿಗೆ ನೀರುಣ್ಣು ವಂತೆ ಮಾಡಿದ್ದಾರೆ. ಅಪೂರ್ವ ಸಂಘಟಕ ಬಿಡುವಿಲ್ಲದದುಡಿಮೆಗಾರನಾದನ್ಯಾಮಗೌಡ ರೈತ ಸಂಘ ಎಂಬ ಸಂಘವೊಂದನ್ನು ರಚಿಸಿಕೊಂಡು ಹಳ್ಳಿ ಹಳ್ಳಿ ತಿರುಗಾಡಿ, ಎಲ್ಲ ರೈತರ ಮನ ವೊಲಿಸಿ, ಅವರಿಂದ ಆಣೆಕಟ್ಟೆಗೆ ಅಗತ್ಯವಾದ ಎಲ್ಲ ಸಹಾಯ ಸಹಕಾರಗಳನ್ನು ಪಡೆದಿದ್ದಾರೆ. ಸರಕಾರದಿಂದ ಯಾವ ಚಿಕ್ಕಾಸನ್ನೂ ಪಡೆಯದೆ, ಹೀಗೆ ರೈತರು ತಮಗೆ ತಾವೇ ಆಣೆಕಟ್ಟೊಂದನ್ನು ಕಟ್ಟಿಕೊಂಡದ್ದು ಭಾರತದಲ್ಲಿ ಮಾತ್ರವಲ್ಲ, ಇಡೀ ಏಶಿಯಾದಲ್ಲೇ ಮೊದಲನೆಯದು !

ಐದು ನದಿಗಳು ಹರಿದು ಹೋಗುವ ಈ ದಕ್ಷಿಣದ ಪಂಜಾಬ ಎಂದು ಕರೆಯಿಸಿಕೊಳ್ಳುವ ವಿಜಾಪೂರಜಿಲ್ಲೆಯಹೆಮ್ಮೆಯಪುತ್ರನಾದ ಈಸಿದ್ದು ನ್ಯಾಮಗೌಡರೆಂದರೆ ಹಳ್ಳಿಯ ಚಿಕ್ಕ ಬಾಲಕರಿಗೂ ಚೆನ್ನಾಗಿ ಗೊತ್ತು. ತನ್ನ ಪ್ರಾಮಾಣಿಕ ನಡೆ ನುಡಿ ಹಾಗೂ ಸಮರ್ಪಣ ಸೇವಾಧಾರಿಯಾದ ಸಿದ್ದು ನ್ಯಾಮಗೌಡರಿಗೂ, ಬರೀ ಥಳಕಿನ ಮಾತುಗಾರ, ಬಾಟ್ಲಿಂಗ್ ಧೀರ, ಗ್ರೀನ್‌ಬೆಲ್ಟ್ ಶೂರ ಇತ್ಯಾದಿ ಬಿರುದಾಂಕಿತರಾದ ರಾಮಕೃಷ್ಣ ಹೆಗಡೆಗೂ ಅಜಗಜಾಂತರ ವ್ಯತ್ಯಾಸ ಕಂಡು ಬರುತ್ತದೆ.

ತಮ್ಮ ಕೈಗೆ ಅಧಿಕಾರ ಸಿಕ್ಕ ಐದಾರು ವರ್ಷದಲ್ಲೇ ರಾಮಕೃಷ್ಣ ಹೆಗಡೆ ಇಡೀ ಕರ್ನಾಟಕ ಸರಕಾರದ ಬೊಕ್ಕಸವನ್ನೇ ಲೂಟಿ ಮಾಡಿದರು. ಆದರೆ ಇದೇ ಸಿದ್ದು ನ್ಯಾಮಗೌಡ ಕೇವಲ

ಮೂರು ವರ್ಷದ ಚಿಕ್ಕ ಅವಧಿಯಲ್ಲೇ ಒಂದು ದೊಡ್ಡ ಅಣೆಕಟ್ಟು ಕಟ್ಟಿ ತೋರಿಸಿದ್ದಾರೆ. ಹೆಗಡೆ ತಲೆ ಮೇಲೆ ಬಾಟ್ಲಿಂಗ್ ಹಗರಣದ ದೊಡ್ಡ ಹೊರೆಯಿದ್ದರೆ ಈ ನ್ಯಾಮಗೌಡರ ತಲೆಗೆ ಪ್ರಾಮಾಣಿಕ ಕಾರ್ಯಕರ್ತರೆಂಬ ತುರಾಯಿ ಇದೆ. ಹೆಗಡೆ ಬರೀ ಚಾಲೂಕು. ನ್ಯಾಮಗೌಡ ಇಂಥದ್ಯಾವುದೂ ಗೊತ್ತಿಲ್ಲದ ನಾಜೂಕು

ಹೀಗಾಗಿ ಬಾಗಿಲ್ಕೋಟೆಯ ಚುನಾವಣಾ ಕಣ ಭಾರೀ ಬಿರುಸಿನ ಕುಸ್ತಿಯ ಕಣ ಆಗಲಿದೆ. ಇಲ್ಲಿ ಸೋತರೆ ರಾಮಕೃಷ್ಣ ಹೆಗಡೆಗೆ ರಾಜಕೀಯ ಸಮಾಧಿಯೇ ಆಗುತ್ತದೆ. ಆದ್ದರಿಂದ ಅವರು ಎಲ್ಲ ಬಗೆಯ ತಂತ್ರ ಕುತಂತ್ರಗಳನ್ನು ಉಪಯೋಗಿಸುತ್ತಾರೆ. ಹಣದ ಹೊಳೆಯೇ ಇಲ್ಲಿ ಹರಿದಾಡುತ್ತದೆ. ತಮ್ಮ ಇಷ್ಟು ದಿನದ ರಾಜಕೀಯದ ಗತ್ತು ಗೈರತ್ತುಗಳೆಲ್ಲವನ್ನು ಹೆಗ[illegible] ಉಪಯೋಗಿಸುತ್ತಾರೆಂಬಲ್ಲಿ ಸಂದೇಹವಿ[illegible] ಆದರೆ ಸಿದ್ದು ನ್ಯಾಮಗೌಡ ಸುಲಭದ ಪಟ್ಟಿ[illegible] ಬೀಳುವ ಆಸಾಮಿಯಂತೂ ಅಲ್ಲ.

ಇಡೀ ರಾಜಕೀಯ ಕ್ಷೇತ್ರವನ್ನೇ ತಮ[illegible] ದುರ್ನಡವಳಿಕೆಯ ಮೂಲಕ ಕೆಟ್ಟು ಕೆಸರೆದ್ದು ಹೋಗುವಂತೆ ಮಾಡಿದ ಹೆಗಡೆಯನ್ನು ಈ ಕ್ಷೇತ್ರದ ಜನ ಬಂದ ದಾರಿಗೆ ಸುಂಕವಿಲ್ಲವೆಂಬಂ[illegible] ಹಿಂದಕ್ಕೆ ಕಳಿಸುತ್ತಾರೆಂದು ಅನೇಕರು ಹೇಳ[illegible]ತ್ತಾರೆ. ಕಾದು ನೋಡಬೇಕು ! ಹೆಗಡೆಯ ಚಾಲೂಕುತನದ ಮಾತು ಗೆಲ್ಲುತ್ತದೋ ? ಸಿದ್ದು ನ್ಯಾಮಗೌಡರ ಪ್ರಾಮಾಣಿಕ ಕೃತಿ ಚಿಕ್ಕಪಡಸಲಗಿ ಬ್ಯಾರೇಜ್ ಗೆಲ್ಲುತ್ತದೋ ? ●

● ವರದಿಗಾರ

# ಕೊಪ್ಪಳದ ಧೀರ ಬರಹಗಾರರು

ದೇಶದ ತುಂಬಾ ಚುನಾವಣಾ ಹಾರಾಟ ನಡೆದಿದ್ದರೆ ಕೊಪ್ಪಳದಲ್ಲಿ ಜಿಲ್ಲಾ ಹೋರಾಟ ನಡೆದಿದೆ. ಇದು ತುಂಬಾ ವಿಚಿತ್ರವಾದರೂ ಸತ್ಯ ಘಟನೆ. ಏಕೆಂದರೆ ಈ ಹೋರಾಟದಲ್ಲಿ ಕೇವಲ ರಾಜಕಾರಣಿಗಳಿರದೆ, ಅದರಲ್ಲಿ ಎಡಪಂಥೀಯ ಬರಹಗಾರರು ಕೂಡ ಸೇರಿಕೊಂಡಿದ್ದಾರೆ. ಬರೀ ರಾಜಕಾರಣಿಗಳಾಗಿದ್ದರೆ ಇಷ್ಟೊತ್ತಿಗೆ ಕಡಿದಷ್ಟೇ ತುರಿಸಿಕೊಂಡು ತೆಪ್ಪಗಾಗುತ್ತಿದ್ದರು. ಚುನಾವಣೆಯೇ ಅವರಿಗೆ ಬಹು ಮುಖ್ಯ ಸಂಗತಿ ಆಗುತ್ತಿತ್ತು.

ಆದರೆ ಬರಹಗಾರ ಮಿತ್ರರಾದ ಅಲ್ಲಮಪ್ರಭು ಬೆಟ್ಟದೂರು, ವಿಠ್ಠಪ್ಪ ಗೋರಂಟ್ಲಿ ಹಾಗೂ ಗವಿಸಿದ್ಧ ಬಳ್ಳಾರಿ ಮುಂತಾದವರ ವಿಷಯವೇ ಬೇರೆ. ಅವರು ಇದನ್ನು ಕೇವಲ ತೋರಿಕೆಗಾಗಿ ಕೈಗೆತ್ತಿಕೊಂಡಿಲ್ಲ. ರಾಜಕಾರಣಿಗಳು ಈ ಕೆಲಸದಲ್ಲಿ ತಂದೊಡ್ಡಬಹುದಾದ ಏನೆಲ್ಲ ಆತಂಕಗಳನ್ನು ಮುರಿದಿಕ್ಕಿ ಶತಾಯ ಗತಾಯ ಕೊಪ್ಪಳವನ್ನು ಜಿಲ್ಲೆಯನ್ನಾಗಿ ಪರಿವರ್ತಿಸುವುದಕ್ಕಾಗಿಯೇ ಇವರೆಲ್ಲ ಈಗ ಅಹೋ ರಾತ್ರಿ ಶ್ರಮಿಸುತ್ತಿದ್ದಾರೆ.

ಗ್ರಾಮಾಂತರ ಪ್ರದೇಶಕ್ಕೂ ಲಗ್ಗೆ ಇಟ್ಟ ಈ ಬರಹಗಾರರು ಅಲ್ಲಿಯ ಜನಗಳಿಗೂ ಜಿಲ್ಲೆಯ ಅವಶ್ಯಕತೆಯನ್ನು ಮನಗಾಣಿಸಿಕೊಟ್ಟು, ಅವರನ್ನು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸುವಂತೆ ಮಾಡುತ್ತಿದ್ದಾರೆ. ಸತ್ಯಾಗ್ರಹ, ಪ್ರತಿಭಟನಾ ರ್‍ಯಾಲಿ, ಕಛೇರಿ ಮುತ್ತಿಗೆ ಮುಂತಾದ ಅಹಿಂಸಾತ್ಮಕ ವಿಧಾನಗಳಲ್ಲಿ ಮುನ್ನಡೆದಿರುವ ಈ ಧೀರ ಬರಹಗಾರರು ಇದೀಗ ಒಂದು ಐತಿಹಾಸಿಕ ಕಾರ್ಯದಲ್ಲಿ ನಿರತರಾಗಿದ್ದಾರೆ.

---

# ಶುಚಿ ರುಚಿಯ ಶಿಕ್ಷಕ : ಮರಿರಾಜ

ಶಿಕ್ಷಕರನ್ನು ಅನೇಕರು ಶಾಲಾಕೋಣೆಯ ಆವರಣದೊಳಗೆ ಇಟ್ಟು ನೋಡುವುದನ್ನೇ ರೂಢಿ ಮಾಡಿಕೊಂಡಿದ್ದಾರೆ. ತನ್ನ ಶಾಲಾ ಕೆಲಸವನ್ನು ಅಚ್ಚುಕಟ್ಟಾಗಿ ನೆರವೇರಿಸುತ್ತ, ಶಾಲಾ ಕೋಣೆಯ ಆವರಣ ಬಿಟ್ಟು ಉಳಿದ ಹೊರಗಿನ ಸಮಾಜ ಜೀವನಕ್ಕೂ ಪಾಠ ಹೇಳಿ ಕೊಡುವ, ಹಾಗೂ ಅದನ್ನು ನೇರ್ಪಡಿಸುವ ಶಿಕ್ಷಕರೂ ಅನೇಕರಿದ್ದಾರೆ. ದೇವದುರ್ಗದ ಮರಿರಾಜ ಅಂಥವರಲ್ಲಿ ಒಬ್ಬರು.

ಶಿಕ್ಷಕ ಸಹಜವಾದ ವಿನಯ ಮತ್ತು ಸಹಕಾರ ಮನೋಭಾವಗಳಿಂದ ತುಂಬಿರುವ ಈ ಮರಿರಾಜ ದೇವದುರ್ಗದಲ್ಲಿ ಶಿಕ್ಷಕ ಸಮುದಾಯ ನಡೆಸುವ ಯಾವುದೇ ಸಾರ್ವತ್ರಿಕ ಕಾರ್ಯಕ್ರಮವಿರಲಿ, ಅಥವಾ ಬೇರೆ ಯಾವುದೇ ಸಂಘಟನೆಗಳು ಜರುಗಿಸುವ ಸಾಹಿತ್ಯ, ಕಲೆ, ಸಂಸ್ಕೃತಿಗೆ ಸಂಬಂಧಿಸಿದ ಚಟುವಟಿಕೆ ಇರಲಿ ಅಲ್ಲಿ ಖಂಡಿತ ಇರುತ್ತಾರೆ.

ಸರಕಾರಿ ನೌಕರರ ಸಂಘದ ಕೆಲಸಗಳಂತೂ ಈ ಮರಿರಾಜರಿಲ್ಲದೆ ನಡೆಯುವಂತಿಲ್ಲ. ಜೊತೆಗೆ ಗೃಹರಕ್ಷಕ ದಳದಲ್ಲೂ ಮನಮುಟ್ಟಿ ದುಡಿತ. ಹೀಗೆ ಊರಿನ ಕೆಲಸಗಳೆಲ್ಲದರಲ್ಲೂ ಸಮಪಾಲು. ಬಾಳಿನಲ್ಲಿ ನೊಂದವರಿಗೆ ಬೆಂದವರಿಗೆ ಮರಿರಾಜ ಕಂಡರೆ ಪ್ರೀತಿ. ಈ ಮರಿರಾಜ ಸಾರ್ವಜನಿಕಕ್ಕೆ ರುಚಿಯನ್ನೂ, ಶುಚಿಯನ್ನೂ ತಂದುಕೊಡುವ ಶಿಕ್ಷಕ.

**—ಶರಣಪ್ಪ ಗುಡದಿನ್ನಿ**

# ಕೆ.ಇ.ಬಿ. ಇಲಾಖೆಗೆ ಏನಾಗಿದೆ ?

ದೇವರನ್ನಾದರೂ ಒಲಿಸಬಹುದು, ದೆವ್ವಗಳನ್ನಾದರೂ ಮಣಿಸಬಹುದು. ಆದರೆ ಕೆ. ಇ. ಬಿ. ಯವರನ್ನು ಒಲಿಸುವುದಾಗಲೀ, ಮಣಿಸುವುದಾಗಲೀ, ಯಾರಿಂದಲೂ ಸಾಧ್ಯವಿಲ್ಲ. ಆ ಇಲಾಖೆಯು ಮಂತ್ರಿಗಾದರೂ ಈ ಇಲಾಖೆ ಮಾತು ಕೇಳುತ್ತದೋ ಇಲ್ಲವೋ ? ಗೊತ್ತಿಲ್ಲ!

ಸುರಪುರ ತಾಲೂಕಿನ ಕಲ್ಲದೇವನ ಹಳ್ಳಿಯಲ್ಲಿ ಕುಡಿವ ನೀರಿಗಾಗಿ ಟ್ಯಾಂಕ ಕಟ್ಟಿ, ಪೈಪ್ ಹಾಕಿಸಿ ಇಲ್ಲಿಗೆ ಮೂರು ವರ್ಷಗಳಾಗಿವೆ. ನೆಲದಲ್ಲಿ ಹಾಕಿದ ಪೈಪಿಗೆ ಜಡಲು ಹಿಡಿದು, ಟ್ಯಾಂಕಿಗೆ ನೂರಾರು ತೂತು ಬಿದ್ದು ಹೋಗಿವೆ. ಆದರೆ ಈವರೆಗಾದರೂ ವಿದ್ಯುತ್ ಇಲಾಖೆಯವರು ಅಲ್ಲಿಗೆ ವಿದ್ಯುತ್ ಸೌಕರ್ಯ ಒದಗಿಸಲಿಲ್ಲ. ಸಂಬಂಧಿಸಿದ ಮಂಡಲ ಪ್ರಧಾನ ರಾಜುಗೌಡ ಪ್ರತಿ ತಿಂಗಳ ಮೀಟಿಂಗನಲ್ಲಿಯೂ ವಿನಂತಿಸಿ, ಸಾಕಾಗಿ ಜಾಯಿಗೆ ಬಂದಂತೆ ಬಯ್ದೂ ಪ್ರಯೋಜನವಾಗದೆ, ಅವರೊಂದಿಗೆ ದೈಹಿಕ ಮಾತುಕತೆ ಆಡೋಣ ಎಂದು ಸಜ್ಜಾಗುತ್ತಿದ್ದಾರೆ. ಈಗಲಾದರೂ ಕೆ. ಈ. ಬಿ. ಕಣ್ಣು ತೆರೆಯಬಹುದೆ ?

---

# ಕೊಟ್ಟಿಲ್ಲ ತಗೊಂಡಿಲ್ಲ ಗುಳುಂ

ನಮ್ಮ ದೇಶದಲ್ಲಿ ಈಗ ಚಿತ್ರ ವಿಚಿತ್ರವಾದ ಕಾನೂನುಗಳು ಜಾರಿಯಲ್ಲಿವೆ. ಕಂದಾಯ ಇಲಾಖೆಯಲ್ಲಂತೂ ಇವುಗಳ ಒಂದು ದೊಡ್ಡ ಹಿಂಡೇ ಇದೆ. ಅವುಗಳಲ್ಲಿ ಆಸ್ತಿ ಪಾಸ್ತಿ ಖರೀದಿಗೆ ಸಂಬಂಧಿಸಿದ ರಜಿಸ್ಟ್ರಿ ಕಾನೂನು ಕೂಡಾ ಒಂದು.

ನೀವು ಇಂದು ಯಾರುಬೇಕಾದವರದೇ ಆಗಿರಲಿ, ಅವರಿಗೆ ಒಂಚೂರು ಗೊತ್ತಿಲ್ಲದೆ, ಅವರ ಹೊಲಮನೆಗಳನ್ನು ರಜಿಸ್ಟ್ರಿ ಮಾಡಿಸಿಕೊಳ್ಳಬಹುದು. ಆಸ್ತಿ ಎಷ್ಟು ಬೆಲೆಯದಾಗಿರುತ್ತದೋ ಅಷ್ಟು ಮೊತ್ತದ ಟ್ಯಾಕ್ಸ ಹಾಗೂ ಎರಡು ಸಾಕ್ಷಿಗಳಿದ್ದರೆ ಸಾಕು. ನೀವು ಪ್ರಧಾನಿ ಚಂದ್ರಶೇಖರರ ಆಸ್ತಿಯನ್ನೇ ರಜಿಸ್ಟ್ರಿ ಮಾಡಿಸಿಕೊಳ್ಳಬಹುದು.

ಈಗ ಯಾದಗಿರಿ ತಾಲೂಕಿನ ಮುನಗಲ್ ಗ್ರಾಮದ ಚೆನಬಸಮ್ಮ ಎಂಬಾಕೆಯ ಹೊಲವನ್ನು ಗುರಸಣಿಗೆಯ ಮಹಾದೇವಪ್ಪ ಎಂಬಾತ ಯಾರದೋ ಹೆಬ್ಬೆರಳು ಒತ್ತಿ, ಸಾಕ್ಷಿ ಹಾಕಿಸಿ ಸ. ನಂ. 16/1 7 ಎಕರೆ 35 ಗುಂಟೆ ರಜಿಸ್ಟ್ರಿ ಮಾಡಿಕೊಂಡಿದ್ದಾನೆ!

ಕೊಟ್ಟಿಲ್ಲ ತಗೊಂಡಿಲ್ಲ. ಗುಳುಂ ಅಂದರು. ಎನ್ನಬಹುದೆ ?

# ತಪ್ಪು ಯಾರದ್ದು?

# ಈ ಸಾವಿಗೆ ಯಾರು ಜವಾಬ್ದಾರರು ?

ಅವನು ಒಬ್ಬ ಮುಗ್ಧ ಹುಡುಗ. ಒಂದು ಗಲ್ಲದಲ್ಲಿ ಹಾಲು ಇನ್ನೊಂದು ಗಲ್ಲದಲ್ಲಿ ನೀರು ಎಂದು ಹೇಳುತ್ತಾರಲ್ಲ. ಅಂಥ ಹುಡುಗ ! ತಂದೆತಾಯಿಯರೊಂದಿಗೆ ಇರಲಿ, ತನ್ನ ಓರಗೆಯ ಗೆಳೆಯರೊಂದಿಗೂ ಅವನು ಹೆಚ್ಚು ಮಾತಾಡದ ವಿಚಿತ್ರ ಸಂಕೋಚದ ಹುಡುಗ. ಮೃದು ಮಾತಿಗ. ಹೀಗಾಗಿ ನೋಡಿದವರ ಕಣ್ಣಿಗೆ ಮುದ್ದು ಹುಡುಗ.

ಬಾಲ್ಯದಿಂದಲೇ ಇಂಥ ಪರಿಯಲ್ಲಿ ಬೆಳೆದ ಆ ಹುಡುಗ ಹೈಸ್ಕೂಲಿಗೆ ಬಂದರೂ ಬದಲಾಗಲಿಲ್ಲ. ಅದೇ ಮುಗ್ಧ ಮಾತು. ಅದೇ ಅಚ್ಚರಿಯ ಕಣ್ಣು. ಅದೇ ಬಗೆಯ ಮೆತ್ತಗಿನ ಮಾತುಗಳು. ಓದಿನಲ್ಲಿ ಸಹಜವಾಗಿಯೇ ಮುಂದು.

ಗುರು ಹಿರಿಯರು. ತಂದೆ ತಾಯಿಗಳು ಎಂದರೆ ಅವನಿಗೆ ಎಲ್ಲಿಲ್ಲದ ಗೌರವ. ಅಂಥವರೊಂದಿಗೆ ಅದೇ ಸನ್ನಡತೆಯ ವ್ಯವಹಾರ ಹಿರಿಯರು, ತಂದೆತಾಯಿಗಳು, ಅಥವಾ ಅವರ ಸರೀಕರು ಯಾರೇ ಆಗಿರಲಿ, ಅವರೊಂದಿಗೆ ಸಲುಗೆಯಿಂದ ವರ್ತಿಸಿದ್ದೇ ಅಪರೂಪ. ತಾನಾಯಿತು ತನ್ನ ಪುಸ್ತಕಗಳಾದವು. ಹೆಚ್ಚಾದರೆ ಓರಗೆಯ ಮಿತ್ರರಾದರು. ಇದಿಷ್ಟೇ ಅವನ ಜಗತ್ತು ! ಹತ್ತಾರು ಜನ ಎಲ್ಲಿಯಾದರೂ ಗುಂಪುಗೂಡಿ ನಿಂತಿದ್ದರೆ. ಅಥವಾ ಇನ್ನೇನನ್ನೋ ಮಾಡುತ್ತಿದ್ದರೆ ಅವರೊಂದಿಗೆ ಸೇರುವುದಕ್ಕೇ ಅವನು ಒಂದುಮುಂದು ನೋಡುವ. ತನ್ನನ್ನು ಯಾರೂ ಗಮನಿಸದಿರಲಿ ಎನ್ನುವ ಮನೋಭಾವದಿಂದಲೇ ಅವನು ಅನೇಕ ವೇಳೆ ಎಲ್ಲರಿಂದ ದೂರ ಇರಲು ಯತ್ನಿಸುವ.

ವರ್ಗದ ಕೋಣೆಯಲ್ಲಿ ಅಧ್ಯಾಪಕರು ಏನಾದರೂ ಕೇಳಿದರೆ, ಎದ್ದು ನಿಲ್ಲುವುದಕ್ಕೆ ತತ್ತರು ಬತ್ತರು ಬರುವ ಅವನು ಅವರು ಕೇಳಿದ ಪ್ರಶ್ನೆಯ ಉತ್ತರ ತನಗೆ ಗೊತ್ತಿದ್ದರೂ, ಹೇಳುವುದಕ್ಕೆ ಹಿಂಜರಿಯುವವ. ಅವನ ಈ ಬಗೆಯ ಪುಕ್ಕಲು ಮನೋಭಾವ ಗೊತ್ತಿದ್ದ ಅಧ್ಯಾಪಕರು ಮೈದಡವಿ ಒತ್ತಾಯ ಮಾಡಿ ಪ್ರೀತಿಯಿಂದ ಕೇಳಿದಾಗ ಮಾತ್ರ ಬಾಯಿ ಬಿಡುವವ, ಅವರ ಧ್ವನಿಯಲ್ಲೇನಾದರೂ ಒಂದಷ್ಟು ಗಡಸು ಕಾಣಿಸಿತೋ ಆ ಕೂಡಲೇ ಬಸವನಹುಳುವಿನಂತೆ, ತನ್ನ ಕೈಕಾಲು ಕೊಂಬು ಮುಖ ಮುಂತಾದ್ದನ್ನೆಲ್ಲ ತನ್ನ ಚಿಪ್ಪಿನೊಳಕ್ಕೇ ಎಳೆದುಕೊಳ್ಳುವ.

ಇದು ಗೊತ್ತಾದ ಅಧ್ಯಾಪಕರು ಹೇಗೋ ಹಾಗೆ ಅವನ ತಂದೆ ತಾಯಿ ಅಣ್ಣ ತಮ್ಮಂದಿರು ಕೂಡ ಅವನೊಂದಿಗೆ ಅದೇ ಬಗೆಯ ಸೂಕ್ಷ್ಮತೆಯಿಂದಲೇ ವರ್ತಿಸುವರು. ಓರಿಗೆಯ ಗೆಳೆಯರೊಂದಿಗೆ ಸಲುಗೆಯ ಮಾತು ವರ್ತನೆ ಬರುವವಾದರೂ ಒಂದು ಮಿತಿಯಲ್ಲೇ ಇರುವವು. ಅನೇಕ ವೇಳೆ ಅವನು ತನ್ನ ಬಟ್ಟೆಬರೆ, ಕಾಪಿ ಪುಸ್ತಕ ಪೆನ್ನು ಮುಂತಾದವುಗಳ ಬಗ್ಗೆಯೂ ತಂದೆ ತಾಯಿಗಳಿಗೆ ಬಾಯಿಬಿಟ್ಟು ಹೇಳುವವನಲ್ಲ

ನಲ್ಲ. ಅವರೇ ಅವನ ಸ್ವಭಾವ ಅರ್ಥ ಮಾಡಿಕೊಂಡು ಆವನು ಬೇಡಿದ್ದನೆಲ್ಲ ಕೊಡಿಸುವರು. ಆಟ-ಪಾಠ ಜಾತ್ರೆ ಕ್ಷೇತ್ರ, ಎಲ್ಲದರಲ್ಲೂ ಅವನದು ಇದೇ ಬಗೆಯ ಸಂಕೋಚ ಪ್ರವೃತ್ತಿ.

ಎಲ್ಲರೂ ಅವನನ್ನು ಬಯಸುತ್ತಿದ್ದಂತೆ ಕ್ರೂರವಿಧಿಯೂ ಅವನನ್ನು ಬಯಸಿತ್ತೆಂದು ಕಾಣುತ್ತದೆ. ಕಳೆದ ತಿಂಗಳು ಅವನು ಪಿ.ಯು.ಸಿ. ಪರೀಕ್ಷೆಗೆ ಕುಳಿತಿದ್ದ. ನಕಲು ಮಾಡುವವರನ್ನು ಕಂಡರೆ ಹೆದರಿ ಹಿಮ್ಮೆಟ್ಟುತ್ತಿದ್ದ ಈ ಸಂಕೋಚದ ಹುಡುಗ ತನ್ನ ಪಾಡಿಗೆ ತಾನು ಉತ್ತರ ಪತ್ರಿಕೆಗಳನ್ನು ಬರೆಯುತ್ತಿದ್ದ. ಅಂದಿನ ವಿಷಯವನ್ನು ಅವನು ಚೆನ್ನಾಗಿ ಓದಿಕೊಂಡಿದ್ದರಿಂದ ಅದನ್ನು ಅಷ್ಟೇ ಉತ್ಸುಕತೆಯಿಂದ ಬಿಡಿಸುತ್ತ ಕುಳಿತಿದ್ದ. ಒಮ್ಮಿದೊಮ್ಮೆಯೇ ಅವನಿದ್ದ ಪರೀಕ್ಷಾ ಕೋಣೆಗೆ ಸ್ಕ್ವಾಡ್‌ನವರು ಬಂದರು. ತನ್ನ ಪಕ್ಕದ ಹುಡುಗನೊಂದಿಗೆ ಅವರೇನೋ ತಕರಾರು ಮಾಡಿದರು. ಪಕ್ಕದ ಆ ಹುಡುಗ ಆ ಸ್ಕ್ವಾಡ್‌ನವರನ್ನೇ ಹೆದರಿಸಿದ ಬಳಿಕ ಅವನ ಹತ್ತಿರ ಬಂದರು. ಅವನ ಸುತ್ತ ಮುತ್ತ ಕಾಗದದ ತುಂಡುಗಳು ಬಿದ್ದಿರುವುದನ್ನು ಕಂಡರು. ಅವನ್ನು ಅದಾರೋ ಅವನ ಸುತ್ತಲಲ್ಲೇ ಎಸೆದಿದ್ದರು. ತಾನು ಕದಿಯದೆ ಯಾರಿಗೆ ಯಾಕೆ ಹೆದರುವುದು ? ಎಂದು ಅವನು ನಿರಾತಂಕ ತಲೆ ಎತ್ತದೆ ಬರೆಯುತ್ತಿದ್ದ. ಸ್ಕಾಡ್‌ನವರು ಬಂದವರೇ ಅವನ ಸುತ್ತಬಿದ್ದಿದ್ದ ನಕಲು ಕಾಗದಗಳನ್ನು ತಕ್ಕೊಂಡರು. ಆಮೇಲೆ ಅವನ ಉತ್ತರ ಪತ್ರಿಕೆ ಕಸಗೊಂಡರು. ಯಾವ ವಿಚಾರಣೆಯನ್ನೂ ಮಾಡಲಿಲ್ಲ. ಆಗ ಅವನು ಅದನ್ನು ಪ್ರತಿಭಟಿಸಬೇಕಿತ್ತು. ಆದರೆ ಅವನ ಗಂಟಲ ಮಾತು ಗಂಟಲಲ್ಲೇ ಉಳಿದವು. ನೋಡು ನೋಡುತ್ತಿದ್ದಂತೆಯೇ ಅವನನ್ನು ಡಿಬಾರ್ ಗೊಳಿಸಿದ ಸ್ಕ್ವಾಡ್‌ನವರು ಧಡ ಧಡ ಹೊರ ನಡೆದರು.

ಅವನಿಗೆ ಆ ಅಪಮಾನ ತಡಕೊಳ್ಳಲಿಕ್ಕಾಗಲಿಲ್ಲ. ತಾನ್ಯಾವ ತಪ್ಪು ಮಾಡಿರದಿದ್ದರೂ ತನಗೆ ಈ ಶಿಕ್ಷೆ ಯಾಕೆ ? ಎಂದು ತಳಮಳಿಸಿದನಷ್ಟೆ ! ಆದರೆ ಆ ತಳಮಳ ಸಿಟ್ಟಾಗಿ, ಜ್ವಾಲೆಯಾಗಿ ಹೊರ ಸಿಡಿಯಲಿಲ್ಲ. ಪರೀಕ್ಷಾ ಕೋಣೆಯಿಂದ ಬಂದವನೇ ನೇರ ತನ್ನ ರೂಮಿಗೆ ಬಂದ. ಆ ಅರಗಳಿಗೆಯಲ್ಲೇ ಅವನು ಏನೆಲ್ಲ ನಿರ್ಧರಿಸಿದ್ದ. ಆಮೇಲೆ ಜನ ತನಗೆ ಏನೆಂದಾರು ? ತಂದೆ ತಾಯಿ ಕುಟುಂಬದವರು ಎಂಥ ಕಷ್ಟಕ್ಕೆ ಗುರಿಯಾದಾರು ? ಎಂದು ಯೋಚಿಸಲಿಲ್ಲ. ಅದೇ ವೇಗದಲ್ಲಿ ಒಂದು ಬಾವಿಗೆ ಹೋಗಿ ನೆಗೆದ ! ಪ್ರೀತಿ ಉಕ್ಕುತ್ತಿದ್ದ ಕನಸು ಅರಳುತ್ತಿದ್ದ ಕಬ್ಬಿನ ಸೊಗಡಿನಿಂದ ಬೆಳೆದಿದ್ದ ಹುಡುಗ ಕ್ಷಣಾರ್ಧದಲ್ಲಿಯೇ ಇಲ್ಲವಾದ !

ಹಾಗಾದರೆ ಈ ತಪ್ಪು ಯಾರದು ? ನೆನಪಿನ ಶಕ್ತಿಯನ್ನು ಮಾತ್ರ ಅವಲಂಬಿಸಿರುವ ಕಾರಣದಿಂದ ನಕಲು ಮಾಡಲು ಪ್ರೇರೇಪಿಸುವ ಪರೀಕ್ಷಾ ಪದ್ಧತಿಯದೆ ? ಯಾವ ವಿಚಾರಣೆಯನ್ನೂ ಸಹ ನಡೆಸದೆ ತಮ್ಮ ಮೂಗಿನ ನೇರಕ್ಕೆ ತೀರ್ಮಾನ ತಕ್ಕೊಂಡ ಸ್ಕ್ವಾಡ್ ಪಾತಕಿಗಳದೆ ? ಅಥವಾ ಇಷ್ಟು ಸಣ್ಣ ಸಂಗತಿಯನ್ನೂ ದಿಟ್ಟತನದಿಂದ ಎದುರಿಸಲಿಕ್ಕಾಗದ ಅವನ ಪುಕ್ಕಲುತನವೆ ?

## ಮತ್ತೆ ಬರುತ್ತಿದ್ದಾರೆ!

ಬಾಯಲ್ಲಿ ಭರವಸೆಯ ಮಳೆಸುರಿಸುತ್ತ
ನಂ ನಿಮ್ಮ ಬಾಯಲ್ಲಿ ಜೊಲ್ಲು ಹರಿಸುತ್ತ
ಹಲ್ಕಿರಿಯುತ್ತ, ಬಾಯ್ ಕಿಸಿಯುತ್ತ
ಜುಬ್ಬ ಟೊಪ್ಪಿಗೆಯೋರು ಬರುತ್ತಿದ್ದಾರೆ!

—ವಿರೇಶ ಹಿರೇಮಠ

# ಶಿಶುನಾಳ ಶರೀಫಸಾಹೇಬನೂ ಕಡಕೋಳ ಮಡಿವಾಳಪ್ಪನೂ

● ಬಾಳಿ ಮೀನಾಕ್ಷಿ

ಶಿಶುನಾಳ ಶರೀಫ್ ಹಾಗೂ ಕಡಕೋಳ ಮಡಿವಾಳಪ್ಪ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬಹು ಜನಪ್ರಿಯರಾದ ಜನಪದ ಕವಿಗಳು. ಶರೀಫರಿಗೆ ಅವರ ಬ್ಯಾಡಗಿ ಮೆಣಸಿನಕಾಯಿ ಯಂಥ ವ್ಯಕ್ತಿತ್ವ ಕಾರಣವಾಗಿದ್ದರೆ, ಮಡಿವಾಳಪ್ಪನಿಗೆ ಕಪ್ಪು ನೆಲದ ಕಸುವು ಕಾರಣವಾಗಿದೆ. ಈಗ ಇಲ್ಲಿ ಇವರಿಬ್ಬರ ಬದುಕು ಹಾಗೂ ಭಾವನೆಗಳ ಕುರಿತು ಒಂದಷ್ಟು ನೋಡೋಣ.

ಇವರಿಬ್ಬರ ಬಾಳುವೆಯಲ್ಲಿ ಬಂದ ಸಂಘರ್ಷಗಳಲ್ಲಿ ಒಂದಷ್ಟು ಹೋಲಿಕೆ ಇದೆ. ಶರೀಫನಿಗೆ ಆತನ ನಡುಬಾಳಿನಲ್ಲಿ ಮಾತ್ರ ಬಿರುಗಾಳಿ ಬೀಸಿದ್ದರೆ ಮಡಿವಾಳಪ್ಪ ಬಿರುಗಾಳಿ ಯೊಂದಿಗೇ ಹುಟ್ಟಿ ಬಂದಿದ್ದಾನೆ. ಮಠದಯ್ಯನೊಬ್ಬನ ಅನಧಿಕೃತ ಪ್ರೇಮ ಪ್ರಕರಣ ವೊಂದರ ಫಲವಾಗಿ ಹುಟ್ಟಿಬಂದ ಮಡಿವಾಳಪ್ಪ ಬಾಲ್ಯದಿಂದಲೇ ಸಮಾಜದ ಅವಹೇಳನೆ ಭರ್ತ್ಸನೆ, ಕಟೂಕ್ತಿಗಳಿಗೆ ತಲೆಯೊಡ್ಡಬೇಕಾಗಿ ಬಂತು. ಆ ದುಷ್ಟ ಸಮಾಜದ ಕಿಚ್ಚಿಗೆ ಸುಟ್ಟು ಹೋಗಬಹುದಾಗಿದ್ದ ಈ ಚೇತನ ಅದು ಹೇಗೋ ಉಳಿದು ಬೆಳೆದುದೇ ಒಂದು ಅಚ್ಚರಿ ! ಪುರೋಹಿತಶಾಹಿಯ ಪಾರುಪತ್ಯವನ್ನು ಬಾಲ್ಯದಿಂದಲೇ ಎದುರಿಸಬೇಕಾಗಿ ಬಂದ ಮಡಿವಾಳಪ್ಪ ನಿಜಕ್ಕೂ ಅಪರೂಪದ ಸ್ಫೋಟವೇ ಅನ್ನಬೇಕು.

ಶರೀಫನಿಗಾದರೆ ಅಕ್ಕರೆಯ ಅಪ್ಪ ಅಮ್ಮಂದಿರ ಆರೈಕೆ ಇತ್ತು. ಪುರೋಹಿತ ಪುಂಡ ರಿಂದ ರಕ್ಷಿಸುವ ಗುರುಗೋವಿಂದ ಭಟ್ಟರ ಆಸರೆ ಇತ್ತು. ಮಡಿವಾಳಪ್ಪನಿಗಾದರೋ ಇಂಥ ಯಾವುದೇ ರಕ್ಷಣೆ ಇಲ್ಲ. ಹುಟ್ಟಿಗೆ ಕಾರಣನಾದರೂ ಸಾಮಾಜಿಕ ಮುದ್ರೆಯೊತ್ತುವ ತಾಕ ತ್ತುಳ್ಳ ಅಪ್ಪನಿಲ್ಲ. ಹೊಟ್ಟೆಪಾಡಿಗಾಗಿ ಕೂಲಿ ಮಾಡುತ್ತ ಪರಊರಿನಿಂದ ಬಂದ ವಿಧವೆ ಅವ್ವ ಬಿಟ್ಟರೆ ಬೇರೊಬ್ಬರಿಲ್ಲ.

ಶರೀಫನಿಗೂ ಮಡಿವಾಳಪ್ಪನಿಗೂ ವ್ಯತ್ಯಾಸ ಬರೋದು ಇಲ್ಲಿಯೇ. ಪ್ರತಿಯೊಂದು ವಿಷಮ ಪರಿಸ್ಥಿತಿಗೂ ಸಡ್ಡು ಹೊಡೆದುನಿಂತ ಮಡಿವಾಳಪ್ಪನಿಗೂ ಪರಿಸ್ಥಿತಿಗಳೊಂದಿಗೆ ರಾಜಿ ಮಾಡಿಕೊಳ್ಳುವ ಸ್ವಭಾವದ ಶರೀಫನಿಗೂ ಬಾಳಿನಲ್ಲಿ ಮಾತ್ರವಲ್ಲ; ಕಾವ್ಯರಚನೆಯ ಜೀವಸತ್ವದಲ್ಲೂ ಅಪಾರ ವ್ಯತ್ಯಾಸವಿರೋದು ಕಂಡುಬರುತ್ತದೆ. ಶರೀಫ್ ತಾಯಿಯ ಅಣತಿ ಯನ್ನೊಪ್ಪಿ ಮದುವೆ ಆದ,ಮಗು ಹಾಗೂ ಹೆಂಡತಿ ಸತ್ತು ಬದುಕು ಅಸಹನೀಯವಾದಾಗ ಮಾತ್ರ ಆತನಿಗೆ ಗುರುವಿನ ನೆನಪಾಯಿತು. ದುಃಖ ತುಂಬಿ ಬಂದಾಗ ಅತ್ತ. ಗುರು ಸೆರೆಕುಡಿ ಅಂದಾಗ ಸೆರೆಕುಡಿದ. ಭಂಗಿ ಸೇದಿದ. ಆ ಅಮಲಿನಲ್ಲಿ ತನ್ನನ್ನು ಮರೆಯಲು ಪ್ರಯತ್ನಿಸಿದ. ಗುರು

ವಿನ ಮುಲಾಜಿಗೆ ಬಿದ್ದು ಬ್ರಾಹ್ಮಣಿಕೆಯನ್ನು ಒಪ್ಪಿಕೊಂಡ. ಆದರೆ ಆ ಬ್ರಾಹ್ಮಣ್ಯದ ಪಕ್ಕಾ ವಿರೋಧಿಯಾದ ವೀರಶೈವತ್ವದಲ್ಲಿ ಬಳಸು ಮಾರ್ಗದ ಮೂಲಕ ತನ್ನನ್ನು ಹುಡುಕಿ ಕೊಳ್ಳುವ ಯತ್ನ ಮಾಡಿದ. ತನ್ನದಲ್ಲದ ಅನ್ಯವಾದೊಂದು ಸಂಸ್ಕೃತಿಯಲ್ಲಿ ತನ್ನನ್ನು ಗುರು ತಿಸಿಕೊಳ್ಳುವ ಗಜಿಬಿಜಿಯನ್ನು ಅನುಭವಿಸಿದ. ಮಡಿವಾಳಪ್ಪ ಎಷ್ಟೇ ಕಷ್ಟಬಂದರೂ ತನ್ನ ಮನಸ್ಸಿನ ನೇರಕ್ಕೆ ಹೋಗಿ, ತನ್ನ ತಾನು ತಿಳಿದು ಇನ್ನೇನಿನ್ನೇನೋ ಎಂದು ಕೇಳಿದ !

ಇವರಿಬ್ಬರ ಬದುಕಿನಲ್ಲಿ ಸಮಾನವೆನ್ನಬಹುದಾದ ಒಂದು ಘಟನೆ ಬರುತ್ತದೆ. ಜನಿವಾರ ವಿಲ್ಲದ ಮುಸ್ಲಿಂ ಹುಡುಗನಿಗೆ ವೇದಾಧ್ಯಯನ ಮಾಡಿಸುವುದು ಅಕ್ಷಮ್ಯ ಅಪರಾಧ ಎಂದು ಬ್ರಾಹ್ಮಣರು ವಿರೋಧಿಸಿದಾಗ ತೀವ್ರಗಾಮಿಯಾದ ಗೋವಿಂದಭಟ್ಟ, ತನ್ನ ಕೊರಳಲ್ಲಿದ್ದ ಜನಿವಾರವನ್ನೇ ತೆಗೆದು ಥಟ್ಟನೆ ಶರೀಫನ ಕೊರಳಿಗೆ ಹಾಕುತ್ತಾನೆ. ಆಗ ಶರೀಫ ಅದನ್ನು ಹಿಗ್ಗಿನಿಂದ "ಹಾಕಿದ ಜನಿವಾರವ; ಸದ್ಗುರುನಾಥ ಹಾಕಿದ ಜನಿವಾರವಾ"ಎಂದು ಹಾಡುತ್ತಾನೆ.

ಜಂಗಮನೊಬ್ಬನ ಮಗನಾದ್ದರಿಂದ ಮಡಿವಾಳಪ್ಪನಿಗೆ ಸಹಜವಾಗಿಯೇ ಅಯ್ತನದ ದೀಕ್ಷೆ ಕೊಡಬೇಕಿತ್ತು. ಆದರೆ ಅದನ್ನು ಇಡೀ ಸಮಾಜ ವಿರೋಧಿಸುತ್ತದೆ. ಆದಾಗ್ಯೂ ಶರಣಬಸಪ್ಪ ತನ್ನ ಗುರು ಮರುಳಾಧ್ಯರನ್ನು ಅಯ್ಯಾಚಾರ ದೀಕ್ಷೆ ಕೊಡುವಂತೆ ಪುಸಲಾಯಿಸುತ್ತಾನೆ. ಆಗ ಹಳಿಪ್ಯಾಟಿ ಬಸಯ್ಯ ಮುಂತಾದ ಜಂಗಮಶಾಹಿ ವ್ಯವಸ್ಥೆ ಅದನ್ನು ವಿರೋಧಿಸುತ್ತದೆ. ಆಗ ಮಡಿವಾಳಪ್ಪ ಆ ಅಯ್ತನದ ಹಮ್ಮನ್ನೆ ಚಿಮ್ಮಿಬಿಡುತ್ತಾನೆ. "ಅಯ್ತನದ ಹಮ್ಮೇನೋ ತಮ್ಮ ! ದೇಹ ಮೈಥುನದಿಂದ ಆದ ತಾಯಿ ತಂದಿ ಸೊಮ್ಮ" ಎನ್ನುತ್ತಾನೆ. ಯಾವುದೋ ಜಾತಿಯು ಮುದ್ರೆಯನ್ನೊತ್ತುವ ಸಂಸ್ಕಾರಗಳು ಯಾವುದೇ ವ್ಯಕ್ತಿಯ ಬಾಳಿಗೆ ಅನಿವಾರ್ಯವಲ್ಲ ಎನ್ನುವ ಮಡಿವಾಳಪ್ಪ ಎಂಥ ಬಂಡಾಯದ ಸ್ಫೋಟ ನೀವೇ ನೋಡಿ!

ವೇದಾಧ್ಯಯನ, ಸಂಧ್ಯಾವಂದನೆ ಮುಂತಾದ ಬ್ರಾಹ್ಮಣ್ಯದ ರಿವಾಜುಗಳ ಮೂಲಕವೇ ಅಧ್ಯಾತ್ಮ ಸಾಧನೆ ಸಾಧ್ಯವೆಂದರ್ಥಮಾಡಿಕೊಂಡ ಶರೀಫನಿಗೂ, ಅಯ್ಯಾಚಾರ ಎಂಬ ಸಂಸ್ಕಾರದ ಮೂಲಕವೇ ಮಾಹೇಶ್ವರತ್ವದ ಪಟ್ಟ ಸಾಧ್ಯ ಎನ್ನುವ ಅಂದಿನ ವೀರಶೈವ ಸಂಸ್ಕಾರವನ್ನು ಅಂದರೆ ಮತ್ತೊಂದು ಬಗೆಯ ಪುರೋಹಿತ ಶಾಹಿತ್ವವನ್ನು ಧಿಃಕರಿಸಿದ ಮಡಿವಾಳಪ್ಪನಿಗೂ ಎಂಥ ಧಿರೋದಾತ್ತ ಫರಕು ಬರುತ್ತದೆ ನೋಡಿ !

ಶರೀಫ್‌ಸಾಹೇಬ ಈಗಾಗಲೇ ಕರ್ನಾಟಕದ ತುಂಬೆಲ್ಲ ಹೆಸರಾಗಿದ್ದಾನೆ. ಅದಕೆ ಅನೇಕ ಕಾರಣಗಳಿವೆ. ಇರಲಿ, ಆದರೆ ಆತನಿಗಿಂತಲೂ ಎತ್ತರದ ಧ್ವನಿಯಲ್ಲಿ ಹೇಳಿ ಬಾಳಿದ ಮಡಿವಾಳಪ್ಪ ಇನ್ನೂ ಎಲೆ ಮರೆಯ ಹಣ್ಣಾಗಿ ಹಾಗೆಯೇ ಉಳಿದಿದ್ದಾನೆ. ಈ ಮಡಿವಾಳಪ್ಪ, ಕಲ್ಬುರ್ಗಿ ಜಿಲ್ಲೆಯ ಓರ್ವ ಧೀಮಂತ ಕವಿ. ಈ ಕವಿ ಇಡೀ ನಾಡಿಗೇ ಕೇಳಿಸುವಂತಾಗಬೇಕಾದುದು ಈಗ ಅಗತ್ಯ.

# ಹೊಣೆಗಾರಿಕೆ ಗೊತ್ತಿಲ್ಲದ ನಮ್ಮ ವಿರೋಧ ಪಕ್ಷಗಳು

ಪ್ರಸ್ತುತ ರಾಜಕೀಯ ಕ್ಷೇತ್ರದಲ್ಲಾಗು ತ್ತಿರುವ ವಿದ್ಯಮಾನಗಳನ್ನು ಗಮನಿಸಿದ ರಾಜ ಕೀಯ ವಿಮರ್ಶಕರು ''ಕೊನೆಗೂ ಈ ದೇಶಕ್ಕೆ ಕಾಂಗ್ರೆ ಬಿಟ್ಟರೆ ಬೇರೆ ಗತಿಯಿಲ್ಲ. ಇದ್ದುದರಲ್ಲೇ ಒಂದಷ್ಟು ಹೆಚ್ಚು ದಿನಗಳ ಭದ್ರ ಸರ್ಕಾರ ವನ್ನು ಕೊಡುವ ತಾಕತ್ತು ಇರೋದೆಂದರೆ ಅದಕ್ಕೊಂದಕ್ಕೇ" ಎಂದು ಹೇಳತೊಡಗಿದ್ದಾರೆ. ಅಷ್ಟೇಕೆ ? ಕಾಂಗ್ರೆಸ ಪಕ್ಷವನ್ನು ಆರಂಭ ದಿಂದಲೂ ನಖಶಿಖಾಂತವಾಗಿ ವಿರೋಧಿಸುತ್ತ ಬಂದವರ ಬಾಯಿಂದಲೂ ಇತ್ತೀಚೆಗೆ ಇದೇ ಉದ್ಗಾರ ಹೊರ ಬರುತ್ತಿದೆ.

ಇತಿಹಾಸ ಪುನರುಕ್ತಿಯಾಗುತ್ತದೆ ಎಂಬ ಹಳೆಯ ಮಾತೊಂದು ಇದೆ. ಈ ಮಾತು ನಮ್ಮ ವಿರೋಧ ಪಕ್ಷಗಳ ಇತಿಹಾಸಕ್ಕೆ ಹೊಂದಿ ಯಾದಷ್ಟು ಬೇರೆ ಇನ್ನಾವುದಕ್ಕೂ ಹೊಂದಿಕೆ ಯಾಗುವುದಿಲ್ಲ. ಪ್ರಥಮತಃ 1967 ರಲ್ಲಿ ಈ ಪಕ್ಷಗಳು ಹೇಗೆ ನಡೆದುಕೊಂಡವೋ ಅದೇ ಥರ 1977 ರಲ್ಲಿಯೂ ಆಮೇಲೆ 1987 ರಲ್ಲೂ ಕೊನೆಗೆ ಈಗ 1991ರಲ್ಲೂ ನಡೆದುಕೊಳ್ಳುತ್ತ ಬಂದಿವೆ. ಯಾವ ಐಡಿಯಾಲಜಿಯ ನೆರವಿಲ್ಲದೆ ಕೇವಲ ಕಾಂಗ್ರೆಸ್ಸನ್ನು ಸೋಲಿಸಬೇಕೆಂಬ ಏಕ ಮೇವ ಉದ್ದೇಶದಿಂದ ಒಂದಾಗುವ ಇವು ಅಧಿಕಾರಕ್ಕೆ ಬಂದ ಕೆಲವೇ ದಿನಗಳಲ್ಲಿ ತಮ್ಮ ಮೂಲ ಉದ್ದೇಶವನ್ನೆ ಮರೆತು ಅಧಿಕಾರ ಕ್ಕಾಗಿ ಕಿತ್ತಾಡತೊಡಗುತ್ತವೆ. ಇದಕ್ಕೆ ಬೇಕಾದ ಷ್ಟು ನಿದರ್ಶನಗಳನ್ನು ನಾವು ನೋಡಬಹುದು.

1967 ರಲ್ಲಿ ಇದೇ ಕಾರಣಕ್ಕಾಗಿಯೇ ಒಂದಾದ ಹಲವು ಪಕ್ಷಗಳು ಆಗ ಬಹುತೇಕ ರಾಜ್ಯಗಳಲ್ಲಿ ಕಾಂಗ್ರೆಸ್ಸೇತರ ಸರಕಾರವನ್ನು ಅಸ್ತಿತ್ವಕ್ಕೆ ತಂದವು. ಇನ್ನೇನು ಕೇಂದ್ರದಲ್ಲೂ ಬದಲಾವಣೆ ತರಬಹುದು ಎನ್ನುವಲ್ಲಿಗೆ ಇವ ಕ್ಕೆಲ್ಲ ಮಹಾಗರ್ವ ಬಂದುಬಿಟ್ಟಿತು. ಆಗ ಮುಂಚೂಣಿಯಲ್ಲಿದ್ದ ಸಮಾಜವಾದಿ ಪಕ್ಷ ಕಾಂಗ್ರೆಸ್‌ಗೆ ಪರ್ಯಾಯವಾದ ಹೊಸ ಪಕ್ಷ ವಾಗಿ ಬೆಳೆಯುವುದೆಂದು ಅನೇಕರು ಆಸೆಪಟ್ಟಿ ದ್ದರು. ಆದರೆ ಆ ಆಸೆ ಈಡೇರಲಿಲ್ಲ. ತರು ವಾಯ ಬಂದ ಸ್ವತಂತ್ರ ಪಕ್ಷವಾಗಲಿ, ಜನ ಸಂಘವಾಗಲೀ, ಕಮ್ಯುನಿಷ್ಟ್ ಪಕ್ಷವಾಗಲಿ ಅಂಥ ತಾಕತ್ತನ್ನು ಮೈಗೂಡಿಸಿಕೊಳ್ಳಲಿಲ್ಲ. ಪರಿಣಾಮವಾಗಿ ಈಗಿನಂತೆ ಆಗಲೂ ಕಾಂಗ್ರೆಸ ಬಿಟ್ಟರೆ ಬೇರೆ ಯಾವ ಪಕ್ಷವೂ ಭದ್ರಸರ್ಕಾರ ಒದಗಿಸಲಾರವು ಎಂದೇ ಅನ್ನಿಸಿತು.

ಹತ್ತು ವರ್ಷಗಳ ತರುವಾಯ 1977 ರಲ್ಲಿ ವಿರೋಧ ಪಕ್ಷಗಳು ಮತ್ತೊಮ್ಮೆ ಅಂಥ ಪ್ರಯತ್ನ ಮಾಡಿನೋಡಿದವು. ತುರ್ತು ಪರಿ ಸ್ಥಿತಿಯ ಅವಾಂತರಗಳಿಗೆ ಬೇಸತ್ತಿದ್ದ ಜನ ತೆಯ ಕಿವಿಗೆ ಈ ವಿರೋಧ ಪಕ್ಷಗಳ ಮಾತು ಗಳು ಹಾಲುಜೇನಾಗಿ ಕಂಡುಬಂದವು. ಜಯ ಪ್ರಕಾಶ ನಾರಾಯಣರ ನೇತೃತ್ವದಲ್ಲಿ ಸಮಗ್ರ ಕ್ರಾಂತಿಯ ಕಹಳೆ ಊದುತ್ತ ಹೊರಬಂದ ಇವು ಜನತಾ ಪಕ್ಷವೆಂಬ ಹೆಸರಿನಿಂದ ಮೊದಲ ಬಾರಿಗೆ ಕಾಂಗ್ರೆಸ್ಸನ್ನು ಎದುರಿಸಿದವು. ಅಷ್ಟು ದಿನಗಳ ಕಾಲ ಸಾಮ್ರಾಜ್ಞಿಯಂತೆ ಮೆರೆದ ಇಂದಿರಾಗಾಂಧಿ ಹಿಂದೆಬಿದ್ದಳು, ಮೊರಾರ್ಜಿ

ದೇಸಾಯಿ ಪ್ರಧಾನಿಯಾದರು. ಆದರೇನು ? ಎರಡುಮೂರು ವರ್ಷದಲ್ಲಿಯೇ ಅಧಿಕಾರ ರಾಜಕಾರಣದ ಕೈ ಮೇಲಾಗಿ ಐಡಿಯಾಲಜಿ ರಾಜಕೀಯದ ಕೈ ಪಾತಾಳಕ್ಕಿಳಿಯಿತು. ಪರಿಣಾಮವಾಗಿ ಮೊರಾರ್ಜಿ ದೇಸಾಯಿಯವರಿಗೆ ಮನೆಗಪ್ಪಣೆ ಸಿಕ್ಕಿತು. ಚರಣಸಿಂಗ್ ತಮ್ಮ ಪಕ್ಷದ ಹೊಟ್ಟೆ ಸೀಳಿ ಬಂದು ಪ್ರಧಾನಿಯಾ–ದರು. ಪ್ರಧಾನಿಯಾದ ಕೆಲವೇ ತಿಂಗಳಲ್ಲಿ ಅವರೂ ಕೂಡ ಹೇಳದೆ ಕೇಳದೆ ಎದ್ದುಬಿಟ್ಟರು.

ಇತ್ತೀಚೆಗೆ ಅಂದರೆ 1989ರಲ್ಲಿ ಮತ್ತೆ ಸ್ವಲ್ಪ ಚಿಗುರಿದಂತಾದ ವಿರೋದ ಪಕ್ಷಗಳು ರಾಜೀವಗಾಂಧಿಯ ಆನುವಂಶೀಯ ಆಡಳಿತವನ್ನು ವಿರೋಧಿಸಿದವು. ಜೊತೆಗೆ ರಾಜೀವರ ಭೋಫೋರ್ಸ್ ಕಬಳಿಕೆಯೇ ಚುನಾವಣೆಯ ದೊಡ್ಡ ವಿಷಯವಾಯಿತು. ಅಧಿಕಾರಕ್ಕೆ ಬಂದ ಹದಿನೈದೇ ದಿನಗಳಲ್ಲಿ ಬೋಫೋರ್ಸ್ ಬಗ್ಗೆ ಕ್ರಮ ತೆಗೆದುಕೊಳ್ಳುವುದಾಗಿಯೂ, ಅದನ್ನು ದೇಶದ ಸಮಸ್ತ ಜನರ ಎದುರುಗಡೆಯಲ್ಲೇ ಬಯಲಿಗಿಡುವುದಾಗಿಯೂ ವಿ. ಪಿ. ಸಿಂಗ್ ಸಾರಿದರು. ಆದರೆ ಅವರು ತಮ್ಮ ಹದಿನೈದು ತಿಂಗಳುಗಳ ಅಧಿಕಾರಾವಧಿಯಲ್ಲಿ ಕೂಡ ಆ ಬಗ್ಗೆ ಯಾವ ಕ್ರಮವನ್ನು ತೆಗೆದುಕೊಳ್ಳಲಾಗಲಿಲ್ಲ. ಬಿಜೆಪಿಗಳ ನೆರವಿನಿಂದ ಅಧಿಕಾರದ ಖುರ್ಚಿಯನ್ನು ಅಲಂಕರಿಸಿದ್ದ ವಿ. ಪಿ. ಸಿಂಗ್‌ರನ್ನು ಬಿ.ಜೆ.ಪಿ. ಬಲು ಚೆನ್ನಾಗಿಯೇ ಬಲಿಪಶುವನ್ನಾಗಿ ಮಾಡಿತು. ಈ ನಡುವೆ ದೇಶದಲ್ಲಿ ಅನೇಕ ಆಲ್ಲೋಲ ಕಲ್ಲೋಲಕಾರಕ ವಿದ್ಯಮಾನಗಳು ನಡೆದುಹೋದವು. ನಿಜಕ್ಕೂ ವಿ. ಪಿ. ಸಿಂಗ್‌ರ ಅವಧಿ ದೇಶದ ಇತಿಹಾಸದಲ್ಲಿ ಒಂದು ಕರಾಳ ಅಧ್ಯಾಯವನ್ನೆ ಸೃಷ್ಟಿಮಾಡಿತು. ಮೀಸಲಾತಿಯ ಒಸ್ನೆಲೆಯಲ್ಲಿ ಅನೇಕ ಅಮಾಯ ಮಕ್ಕಳು ಆತ್ಮಹತ್ಯೆ ಮಾಡಿಕೊಂಡವು. ಅದನ್ನು ತುಂಬಾ ಮಾನವೀಯತೆ ಹಾಗೂ ಪ್ರೀತಿಯಿಂ ನೋಡಬೇಕಾಗಿದ್ದ ವಿ. ಪಿ. ಸಿಂಗ್‌ರ ಕವಿತ್ವ ಹೃದಯ ಅದೇನು ಕಾರಣವೋ ಕಲ್ಲಾ ಗಿಬಿಟ್ಟಿತು. ಈ ನಡುವೆ ಚಂದ್ರಶೇಖರ್ ಬೇ ತಾವು ಕುಳಿತ ಹಡಗಿಗೇ ತೂತು ಕೊರೆದರು ಯಾರನ್ನು ಕಂಡರೆ ಮೆಟ್ಟಿಬೀಳುತ್ತಿದ್ದರೊ ಅಂಥವರೊಂದಿಗೆ ಅಧಿಕಾರದ ಹಪಾಹಪಿಯಿಂ ಒಂದಾದರು. ತನ್ನ ಹತ್ತಿರ ಕೇವಲ 5 ಮಂದಿ ಮಾತ್ರ ಇದ್ದರೂ, 554 ಜನ ಸದಸ ರಿರುವ ಸರ್ಕಾರದ ಪ್ರಧಾನಿಯಾಗಿ ಕಾಯ ನಿರ್ವಹಿಸುವ ಸರ್ಕಸ್ ಮಾಡಿದರು.

ಇದರಿಂದಾಗಿ ಮತ್ತೆ ವಿರೋಧ ಪಕ್ಷಗಳ ಈಗ ಹಲವು ಹತ್ತು ಸೀಳುಹೋಳುಗಳಾ ಶಕ್ತಿವಿಹೀನವಾಗಿ ಒರಲುತ್ತಿವೆ. ಈಗ ಇದಕ ಕನಿಷ್ಟ ತಾವಾದರೂ ಒಂದು ಕಡೆ ನಿಂತ ಕಾಂಗ್ರೆಸ್ಸನ್ನು ಎದುರಿಸಬೇಕೆಂಬ ವ್ಯವಧಾ ವಿಲ್ಲ. ಬಿಜೆಪಿ ತನ್ನ ರಾಮರಥದ ಗುಂಗಿನಲ್ಲಿ ತಾನು ಯಾರೊಂದಿಗೂ ಸೇರಿಕೊಳ್ಳ ಸ್ವತಂತ್ರ ಪಕ್ಷವಾಗಿ ಚುನಾವಣೆ ಎದುರಿಸುತ್ತೇನ ಎನ್ನುತ್ತಿದೆ. ಬೊಮ್ಮಾಯಿ, ವಿ. ಪಿ. ಸಿಂಗ್ ಹೆಗಡೆಗಳ ಜನತಾದಳ ಕೂಡ ತಾನೇನು ಕಮ್ಮಿ ಅಂತ ಸದ್ದು ಹೊಡೆಯುತ್ತಿದೆ. ಕಮ್ಯುನಿಷ್ಟ ಪಕ್ಷವೂ ತಾನು ಪ್ರತ್ಯೇಕವಾಗಿಯೇ ಕಣಕ್ಕಿ ಯುತ್ತೇನೆ ಎನ್ನುತ್ತಿದೆ. ಪ್ರಧಾನಿ ಚಂದ್ರ ಶೇಖರ್‌ರ ಜನತಾದಳ (ಎಸ್) ದೇಶದ ಯಾವ ಮೂಲೆಯಲ್ಲಿಯೂ ನೆಲೆ ಇಲ್ಲದಿದ್ದರೂ ತನ್ನ ಪಕ್ಷವೇ ಅಧಿಕಾರಕ್ಕೆ ಬರುತ್ತದೆ ಎಂದು ಕೂಗು ತ್ತಿದೆ. ಇನ್ನುಳಿದ ಪ್ರಾಂತೀಯ ಪಕ್ಷಗಳಾ

ತೆಲುಗುದೇಶಂ, ತಮಿಳ್ನಾಡಿನ ಡಿ.ಎಂ.ಕೆ. ಗಳು ಕೂಡ ಪ್ರತ್ಯೇಕ ಪ್ರತ್ಯೇಕವಾಗಿಯೇ ಕಣಕ್ಕಿಳಿಯುವ ಸನ್ನಾಹ ನಡೆಸಿವೆ. ಅದೇಥರ ಕರ್ನಾಟಕದಲ್ಲೂ ರೈತಸಂಘ ತಾನೂ ಒಂದು ಕೈನೋಡುತ್ತೇನೆ ಎನ್ನುತ್ತಿದೆ.

ಹೀಗೆ ಸಮೂಹ ಹೊಣೆಗಾರಿಕೆ ಎಂದರೇನೆಂಬುದನ್ನೇ ಅರಿಯದ ಈ ವಿರೋಧ ಪಕ್ಷಗಳೇ ಇವೊತ್ತಿನ ಏನೆಲ್ಲ ಅವಾಂತರಕ್ಕೆ ಮುಖ್ಯ ಕಾರಣಗಳು. ಕಾಂಗ್ರೆಸ್‌ನ್ನು ಮೂದಲಿಸುವ ಇವಕ್ಕೇನೂ ಖುರ್ಚಿ ವ್ಯಾಮೋಹ ಕಮ್ಮಿ ಇಲ್ಲ. ನೆಹರೂ ಮನೆತನದ ವಂಶವಾಹಿ ವ್ಯವಸ್ಥೆಯನ್ನು ವಿರೋಧಿಸುವ ಈ ಪಕ್ಷಗಳಲ್ಲೂ, ತಾನು ತನ್ನ ಮಗ ಹಾಗು ಮೊಮ್ಮಕ್ಕಳು ಕೂಡ ಅಧಿಕಾರದ ಖುರ್ಚಿಯ ಮೇಲೆ ಸದಾಕಾಲವೂ ವಿರಾಜಮಾನವಾಗಿರಬೇಕೆಂದು ಬಯಸುವವರು ಅಸಂಖ್ಯಾತರಾಗಿದ್ದಾರೆ. ಪಿತೂರಿಯಿಂದಾದರೆ ಪಿತೂರಿ, ಹಣದಿಂದಾದರೆ ಹಣ, ಗುಂಡಾಗಿರಿಯಿಂದಾದರೆ ಗುಂಡಾಗಿರಿಗಳಿಂದಲಾದರೂ ಅಧಿಕಾರದಲ್ಲಿ ಉಳಿಯಬೇಕು ಎನ್ನುವವರು ಸಾಕಷ್ಟಿದ್ದಾರೆ. ಅಂಥವರಲ್ಲಿ ಸಧ್ಯದ ಪ್ರಧಾನಿ ಚಂದ್ರಶೇಖರರೂ ಒಬ್ಬರು ಈತ ತನ್ನ ಸ್ವಾರ್ಥ ಸಾಧನೆಗಾಗಿ ತಾನು ಕುಳಿತ ಟೊಂಗೆಯನ್ನೆ ಕಡಿದು ಹಾಕಿದ್ದಾನೆ. ತಾನೂ ಉಳಿಯದೆ ತನ್ನವರೂ ಉಳಿಯದಂತೆ ನೋಡಿಕೊಂಡಿದ್ದಾನೆ.

ವಿಚಿತ್ರವೆಂದರೆ ಇವರಲ್ಲಿ ಎಂತೆಂಥ ಕೋಡಂಗಿಗಳಿದ್ದಾರೆಂದರೆ, ರಾಜನಾರಾಯಣ, ದೇವಿಲಾಲ ಥರದವರೂ ಅಧಿಕಾರದ ಗದ್ದುಗೆ ಏರಿ ಇಳಿದಿದ್ದಾರೆ.

ಅನೇಕರು ಇವರಿಗೆಲ್ಲ ಕಾಂಗ್ರೆಸ್ಸೇ ಪರಮ ವೈರಿ ಎಂದು ತಿಳಿದಿದ್ದಾರೆ. ಆದರೆ ಇವರು ತಮಗೆ ತಾವೇ ಮೊದಲು ವೈರಿಗಳು ಆಮೇಲೆ ಕಾಂಗ್ರೆಸಿನ ವೈರಿಗಳು. ಇಂಥ ಎಡಬಿಡಂಗಿ ವಿರೋಧ ಪಕ್ಷದವರಿಂದ ಈ ದೇಶಕ್ಕೆ ಏನಾದರೂ ಪ್ರಯೋಜನ ಉಂಟೆ ? 

## ಯಾರು ದಲಿತ ?

ವೈ. ಟಿ. ಕಸ್ತೂರಿ

ದಲಿತ ಸುಟ್ಟು ಕೊಟ್ಟ
ಹಸಿದೆನೆಯ ಜೋಳ
ನಮಗೆ ಬೇಕು.

ದಲಿತ ಮುರಿದು ಕೊಟ್ಟ
ಹಸಿದಂಟಿನ ಕಬ್ಬು
ನಮಗೆ ಬೇಕು

ದಲಿತ ತುಳಿದು ಕೈಬಳಸಿ
ರಾಶಿ ಮಾಡಿದ ಜೋಳ
ನಮಗೆ ಬೇಕು

ದಲಿತ ಗಿರಣಿಯಲ್ಲಿ
ಬೀಸಿ ತಂದು ಹಿಟ್ಟು
ರೊಟ್ಟಿ ನಮಗೆ ಬೇಕು

ದಲಿತ ಮುಟ್ಟಿದರೆ
ಖಂಡಿತಾ ಬೇಡ !
ಈಗ ಹೇಳಿ-ಯಾರುದಲಿತ ?

# ಬಸವಣ್ಣ ನಿಲ್ಲದ ಬಸವ ಕಲ್ಯಾಣ

○ ಅಲೆಮಾರಿ




ಬಸವಣ್ಣ ಈ ದೇಶದ ಬಹು ದೊಡ್ಡ ವ್ಯಕ್ತಿ. ಆತ ಬದುಕಿ ಬಾಳಿದ ಬಸವಕಲ್ಯಾಣ ಹೇಗಿರಬಹುದೆಂಬ ಕುತೂಹಲ ಯಾರಿಗೆ ತಾನೆ ಇರುವುದಿಲ್ಲ ? ಆದರೆ "ಆಸೆ ಆಮಿಷವ ಅಳಿದವಂಗಲ್ಲದೆ ಕಲ್ಯಾಣವ ಹೊಗೆಬಾರದು" ಎಂದೊಬ್ಬ ವಚನಕಾರ್ತಿ ಹೇಳಿದ್ದಾಳೆ. ಇವೆಲ್ಲ ವನ್ನೂ ಭರಪೂರ ತುಂಬಿಟ್ಟುಕೊಂಡ ನನ್ನಂಥ ವರು ಕಲ್ಯಾಣಕ್ಕೆ ಹೋಗುವುದೆಂದರೆ ಅದು ಒಂದು ಬಗೆಯ ಅಣಕವೇ ಸರಿ ! ಏನಾದರಾಗಲಿ, ಜೀವನದಲ್ಲೊಮ್ಮೆ ಆ ಕಲ್ಯಾಣವನ್ನು ಕಣ್ಣಲ್ಲಿ ತುಂಬಿಕೊಳ್ಳಬೇಕೆಂಬ ಅದಮ್ಯ ಆಸೆ ಯಿಂದ ಕಳೆದವಾರ ಅಲ್ಲಿಗೆ ಹೋಗಿದ್ದೆ.

ಇಂದಿನ ಎಲ್ಲ ತಾಲೂಕು ಪ್ರದೇಶಗಳಂತೆ ಜನಜಂಗುಳಿಯಿಂದ ಕಿಕ್ಕಿರಿಗಿರಿಯುತ್ತಿರುವ ಈ ಬಸವಕಲ್ಯಾಣಕ್ಕೆ ಇಳಿಯುತ್ತಲೇ ಅಲ್ಲಿನ ಧೂಳು ತುಂಬಿದ ರಸ್ತೆಗಳು, ಕ್ಷಣ ಪುರಸೊತ್ತಿಲ್ಲದೆ ಒಂದೇ ಸಮ ಓಡಾಡುವ ಲಾರಿ ಟ್ರಕ್ಕುಗಳು, ಅವಕ್ಕೆ ಅಡ್ಡಬಂದು ಪ್ರಾಣಾಪಾಯದಿಂದ ಪಾರಾಗುವ ಹಂದಿಗಳು, ಅದೇ ಥರ ಜೀವ ಕೈಯ್ಯಲ್ಲಿ ಹಿಡಕೊಂಡು ಓಡಾಡುವ ಮಂದಿಗಳು ನನ್ನನ್ನು ತಬ್ಬಿಬ್ಬುಗೊಳಿಸಿದವು.

ನಾನು ಆದಾರನ್ನೋ ಕೇಳಿದೆ. ಬಸವಣ್ಣನವರ ಮಹಾಮನೆ, ಹಾಗೂ ಅವರ ಅನುಭವ ಮಂಟಪ ಎಲ್ಲಿದೆ ? ಅಂತ ವಿಚಾರಿಸಿದೆ. ನಾನು ವಿಚಾರಿಸಿದ ಹತ್ತು ಜನರಲ್ಲಿ ಒಬ್ಬ ಮಾತ್ರ ಬಸವಣ್ಣನ ಗುಡಿಯ ದಾರಿ ತೋರಿಸಿದನೇ ಹೊರತು, ಮಹಾಮನೆ ಎಲ್ಲಿದೆ ಎಂಬುದನ್ನು ತಿಳಿಸಲಿಲ್ಲ. ಸರಿ, ಯಾವುದಾದರೂ ಆದೀತು ಎಂದು ನೇರ ಬಸವಣ್ಣನ ಗುಡಿಗೆ ಹೋದೆ. ತುಂಬಾ ಇಕ್ಕಟ್ಟಾದ ರಸ್ತೆಯ ಮೂಲಕ ಒಂದು ಕಿ. ಮೀ. ಕ್ರಮಿಸಿದ ಮೇಲೆ, ಇನ್ನಷ್ಟು ಇಕ್ಕಟ್ಟಾದ ಸಂದಿಗೆ ತಿರುಗಿ ಹೋದರೆ, ಬಸವಣ್ಣನವರ ದೇವಾಲಯ ಬರುತ್ತದೆ. ಯಾವ ವ್ಯಕ್ತಿ ಎನ್ನ ಕಾಲೇ ಕಂಭ, ಶಿರವೇ ಹೊನ್ನ ಕಳಸ, ದೇಹವೇ ದೇಗುಲ ಎಂದು ಒಡಿದಾಡಿ ಹೋದನೋ ಅದೇ ವ್ಯಕ್ತಿಯ ಹೆಸರಿನ ಮೇಲೆ ಒಂದು ದೊಡ್ಡ ದೇವಾಲಯವೊಂದು ಇಲ್ಲಿ ನಿರ್ಮಾಣವಾಗಿದೆ.ದೊಡ್ಡ ಪಟಾಂಗಣಕ್ಕೆ ಹೊಂದಿಕೊಂಡಂತೆ ಬಯಲು ಪಡಶಾಲೆಗಳನ್ನು ಕಟ್ಟಿಸಿದ ಗೋಡೆಗಳಿಗೆಲ್ಲ, ಎಲ್ಲ ಶರಣರ ವಿವಿಧ ಭಾವಭಂಗಿಯ ಕಾಯಕಗಳ ಚಿತ್ರಗಳನ್ನು ಚೆನ್ನಾಗಿ ಬರೆಸಿದ್ದಾರೆ. ಸಂಬಂಧಿಸಿದವರ ಒಂದಷ್ಟು ಚರಿತ್ರೆಯನ್ನು ನಾಲ್ಕಾರು ಸಾಲುಗಳಲ್ಲಿ ಬಣ್ಣಿಸಿದ್ದಾರೆ. ಇದ್ದುದರಲ್ಲೇ ಇದೊಂದು ಸಮಾಧಾನವೆಂದುಕೊಂಡು ಗರ್ಭಗುಡಿಯ ಹತ್ತಿರಕ್ಕೆ ಹೋದರೆ ಅಲ್ಲೊಂದು ದೊಡ್ಡ ಬೋರ್ಡು ಕಾಣಿಸುತ್ತದೆ. ಯಾವ ಮಹಾನುಭಾವ ದೇವಾಲಯಗಳಲ್ಲಿ ನಡೆಯುತ್ತಿದ್ದ ಪುರೋಹಿತಶಾಹಿಯ ಸುಲಿಗೆಯನ್ನು ಖಂಡಿಸಿದನೋ ಅದೇ ಮಹಾನುಭಾವ

ಮೂರ್ತಿಯ ಮಗ್ಗುಲಲ್ಲೇ, ಇಂಥ ಪೂಜೆಗೆ ಇಷ್ಟು ಹಣ; ಅಂಥ ಪೂಜೆಗೆ ಅಷ್ಟು ಹಣ ಎಂಬ ಧಾರಣೆಗಳನ್ನು ಅದರಲ್ಲಿ ಬರೆದಿದ್ದಾರೆ.

ಸುಮ್ಮನೆ ಹಣೆ ಚಚ್ಚಿಕೊಂಡು ಮುಂದಕ್ಕೆ ಸಾಗಿದರೆ, ಬಸವಮೂರ್ತಿಯ ಇನ್ನೊಂದು ಮಗ್ಗುಲಿಗೆ. ಆ ದೇವಾಲಯದ ಪೂಜಾರಿ ಪಂಚಾಂಗ ಬಿಚ್ಚಿಕೊಂಡು ಅದಾರಿಗೋ ಕಣಿ ಹೇಳತೊಡಗಿದ್ದಾನೆ. ಆ ಹೊತ್ತಿನಲ್ಲಿ ಮಹಾರಾಷ್ಟ್ರದ ಕಡೆಯಿಂದ ಬಂದ ಭಕ್ತಾದಿಗಳು ಬಸವಣ್ಣನವರ ಬಗ್ಗೆ ಕೇಳಬೇಕೆಂದು ತವಕಿಸುತ್ತಿದ್ದಾರೆ. ಆದರೆ ಆ ಪೂಜಾರಿ ಪಂಚಾಂಗದಲ್ಲಿ ಮಗ್ನನಾಗಿದ್ದಾನೆ!

ಹೊರಗೆ ಬಂದು ಕೇಳಿದರೆ ಬಸವಣ್ಣನ ಪರುಷಗಟ್ಟೆ ಅಲ್ಲಿಯೇ ಹತ್ತಿರದಲ್ಲಿಯೇ ಇರುವುದಾಗಿ ಗೊತ್ತಾಯಿತು. ಅವರಿವರನ್ನು ವಿಚಾರಿಸಿಕೊಳ್ಳುತ್ತ ಸಂದಿಗೊಂದಿಗಳೊಳಗಿಂದ ಹಾಯ್ದು, ಹಾದಿಗಡ್ಡವಾಗಿ ಗಂಗೆ ಯಮುನೆಯರಂತೆ ಹರಿಯುವ ಹಲವು ಹತ್ತು ಬಚ್ಚಲು ಮೋರಿಗಳನ್ನು ಜಿಗಿಯುತ್ತ, ಅಲ್ಲಲ್ಲಿ ಮಡುಗಟ್ಟಿ ನಿಂತ ಆ ಬಚ್ಚಲು ಹೊಂಡಗಳೊಳಗಿಂದ ಮೈ ರ್‍ಝಾಡಿಸಿಕೊಂಡು ಬರುವ ಹಂದಿಗಳಿಂದ ಬಚಾವಾಗುತ್ತ; ಕಾಲಲ್ಲಿ ಬಂದು ನಡಿಗೆಗೆ ತೊಡಕುಮಾಡುವ ಕೋಳಿ, ನಾಯಿಗಳನ್ನು ದಾಟುತ್ತ ಅದು ಹೇಗೋ ಪರುಷಗಟ್ಟೆಗೆ ಬಂದರೆ ನನಗೆ ದಿಗ್‌ಭ್ರಮೆ ಆಗುವುದೊಂದೇ ಬಾಕಿ ಉಳಿದಿತ್ತು!

ಸುತ್ತೆಲ್ಲ ಗಲೀಜ ಗಂಜಳ. ಗಬ್ಬುನಾತ. ಪಕ್ಕದಲ್ಲೇ ಒಂದು ಮಸೀದಿ. ಆ ಮಸೀದಿಗೆ ಅಂಟಿಕೊಂಡಂತೆ ಮುಸಲ್ಮಾನರ ಮನೆಗಳು ಹಾದಿಯಲ್ಲಿ ಬಿದ್ದ ತಿಪ್ಪೆರಾಶಿ. ಬಚ್ಚಲುಗುಂಡಿ. ಕೋಳಿಪುಚ್ಚ. ಹಂದಿಹಿಂಡು ಜೊತೆಗೆ ಅದಾರ ಮನೆಯಿಂದಲೋ ತೂರಿ ಬರುವ ಮಾಂಸದ ಒಗ್ಗರಣೆ ವಾಸನೆ. ಕೋಳಿತತ್ತಿಯ ಮತ್ತೊಂದು ಬಗೆಯ ಕಂಪು. ಇವೆಲ್ಲ ದಾಟಿ ಹೋದರೆ, ಒಂದು ಎತ್ತರ ಕಟ್ಟೆ, ಆ ಕಟ್ಟೆಯ ಮೇಲೊಂದು ನಂದಿ ಮೂರ್ತಿ. ಅದಕ್ಕೆ ಯಾವುದೇ ವ್ಯವಸ್ಥೆ ಇಲ್ಲ. ಅದರ ತಲೆಯ ಮೇಲೆ ನಾಲ್ಕಾರು ಟಿನ್ ಹಾಕಿದ್ದಾರೆ. ಕೆಳಗೆ ಮಣ್ಣು ಕಲ್ಲು, ತುಂಬಿದ ನೆಲದ ಮೇಲೆ ಮಕ್ಕಳು ಓದು ಕಲಿಯುತ್ತಾರೆ. ಛಡಿ ಹಿಡಿದು ಕುಳಿತ ಮಾಸ್ತರು ಮಕ್ಕಳಿಗೆ ಅಲ್ಲಿ ಹೇಳಿಕೊಡುತ್ತಿದ್ದಾನೆ. ಬಸವಣ್ಣ ಪ್ರತಿನಿತ್ಯ ಇದೇ ಕಟ್ಟೆಯ ಮೇಲೆ ಬಂದು ಕುಳಿತಿರುತ್ತಿದ್ದನಂತೆ! ಇಲ್ಲಿ ಆತ ಕುಳಿತು ಹೇಳುತ್ತಿದ್ದ ಮಾತುಗಳಿಗೆಲ್ಲ ಪುರುಷಶಕ್ತಿ ಇತ್ತಂತೆ. ಆದರೆ ಈಗ ಆತನ ಕಟ್ಟೆಗೆ ಯಾವ ಶಕ್ತಿಯೂ ಇದ್ದಂತಿಲ್ಲ. ಈಗ ಅದೊಂದು ಅಸಡ್ಡೆಗೆ ಗುರಿಯಾದ ಸ್ಥಳವಾಗಿದೆ.

ಅಲ್ಲಿಂದ ಮೆಲ್ಲಗೆ ಜಾಗ ಖಾಲಿ ಮಾಡಿದೆ. ನಾನು ಬಸವಣ್ಣ ಇಂಥಲ್ಲಿ ಹೇಗೆ ವಾಸ ಮಾಡಿದ್ದಾನು? ಲಡ್ಡುಗಟ್ಟಿದ ಇಲ್ಲಿಯ ಜನರಲ್ಲಿ ಎಂಥ ಪ್ರೇರಣೆ ಹುಟ್ಟಿಸಿದ್ದಾನು? ಕನಿಷ್ಟ ತಮ್ಮ ಮನೆಯ ಮುಂದಿನ ಅಂಗಳದ ಕಾಳಜಿ ಕೂಡ ಇಲ್ಲದಿರುವ ಈ ಮಂದಿಯಲ್ಲಿ ಅದೆಂಥ ಪ್ರಜ್ಞೆಯನ್ನು ಹುಟ್ಟುಹಾಕಿದ್ದಾನು? ಎಂದು ಯೋಚಿಸುತ್ತ ಹೊರಟಿದ್ದರೆ ನನ್ನ ಕಾಲುಗಳು 'ಮಡಿವಾಳ ಮಾಚಯ್ಯನ ಹೊಂಡದ ಹತ್ತಿರ ಬಂದು ನಿಂತಿದ್ದವು. ಇಲ್ಲಿ ಕೂಡ ಮಡಿವಾಳ ಮಾಚಯ್ಯ ಗುಡಿ ಇದೆ. ಸುತ್ತಲಿನ ಪಾಳಿಯೆಲ್ಲವೂ ಹಾಳು ಸುರಿಯುವ ಈ ಹೊಂಡದ

ನಿರಂತರೂ ಬಿದ್ದ ಗಂಜಳವಾಗಿವೆ. ನೋಡಿ ಕೊಳ್ಳುವವರು ಇಲ್ಲಿ ಯಾರೂ ಇದ್ದಂತಿರಲಿಲ್ಲ. ಕೇಳಿದರೆ ಒಂದು ಮುದುಕಿ ಇತ್ತೆಂದೂ ಹತ್ತಿರ ದಲ್ಲೇ ದನ ಮೇಯಿಸಲು ಹೋಗಿದ್ದಾಳೆಂದೂ ಗೊತ್ತಾಯಿತು. ದೇವಾಲಯದ ಹಿಂದೆಲ್ಲ ಜನ ಹೊಲಸು ಮಾಡಿದ್ದಾರೆ. ಆ ನರಕದ ವಾಸನೆ, ದೇವಾಲಯದ ಒಳಗೂ ನುಗ್ಗಿ ಬರುತ್ತದೆ !

ಅಲ್ಲಿಂದ ತ್ರಿಪುರಾಂತಕೇಶ್ವರ ಕೆರೆ, ಹಾಗೂ ಅದರ ದಂಡೆಯ ಮೇಲೆ ಅಲ್ಲಮ ಪ್ರಭುವಿನ ದೇವಾಲಯವಿದೆ. ಅಲ್ಲೊಬ್ಬ ಒಡೆಯರು ಮಲ್ಲಿಕಾರ್ಜುನ ಸ್ವಾಮಿ ಎನ್ನುವ ವರು ಇದ್ದರು. ಅವರು ಧಾರವಾಡದ ಕಡೆ ಯವರು. ಇಲ್ಲಿಗೆ ಬಂದು ಹತ್ತಿಪ್ಪತ್ತು ವರ್ಷ ಗಳೇ ಆಗಿದೆ. ತುಂಬಾ ಓದಿಕೊಂಡ ಆ ಮಲ್ಲಿಕಾರ್ಜುನ ಸ್ವಾಮಿ ನಮಗೆಲ್ಲ ಅಲ್ಲಮ ಪ್ರಭು, ಅಕ್ಕಮಹಾದೇವಿ, ಬಸವಣ್ಣ ಮುಂತಾದ ವ್ಯಕ್ತಿಗಳ ಮಹತ್ತನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದರು. ಆದರೆ ಅವರಿಗೂ ಬಸವಣ್ಣನ ಸ್ಮಾರಕಗಳ ಬಗ್ಗೆ ಇಲ್ಲಿನ ಜನಗಳಿಗೆ ಇರುವ ಅಸಡ್ಡೆಯನ್ನು ಕಂಡುಬೇಜಾರು ಬಂದಿದೆ

ಅಲ್ಲಿಂದ ಮುಂದಕ್ಕೆ ಬಂದರೆ, ಅಕ್ಕ ನಾಗಮ್ಮನ ಗವಿ, ಅದರ ಮಗ್ಗುಲಲ್ಲೇ ನೀಲಾಂಬಿಕೆ ಗಂಗಾಂಬಿಕೆಯರ ಗವಿ, ಅದರ ಹತ್ತಿರದಲ್ಲಿ ಬಸವಣ್ಣನವರ ಗವಿ. ಹೀಗೆ, ನಾಲ್ಕಾರು ಪುರಾತನ ಸ್ಮಾರಕಗಳು ಸಿಕ್ಕವು. ಅವುಗಳ ಬಗ್ಗೆ ವಿವರ ಕೇಳೋಣವೆಂದು ಹತ್ತಿ ರದ ಯಾವುದೋ ಕುಟುಂಬದವರಿಗೆ ವಿಚಾರಿಸಿ ದರೆ ಅವರಾರಿಗೂ ಈ ಬಗ್ಗೆ ಹೆಚ್ಚಿಗೆ ಗೊತ್ತಿಲ್ಲ ಮಾತ್ರವಲ್ಲ, ಹಾಗೆ ತಮ್ಮನ್ನು ವಿಚಾರಿಸಿದವ ರೊಂದಿಗೆ ಮಾತಾಡುವುದಕ್ಕೂ ಅವರಿಗೆ ಬೇಸರ. ಗವಿಗಳನ್ನು ಹೊಕ್ಕು ನೋಡಿದರೆ ಎಂಥದೋ ನೆಮ್ಮದಿ, ಒಂದು ರಾಜ್ಯದ ಮುಖ್ಯಮಂತ್ರಿ ಯಾಗಿದ್ದ ಬಸವಣ್ಣ ಅಂಥ ಗವಿಯಲ್ಲಿ ಬಂದ ಕುಳಿತು ಧ್ಯಾನಾಸಕ್ತನಾಗುತ್ತಿದ್ದ ಎಂಬುದ ನೆನಪಾಗಿ ಮೈ ರೋಮಾಂಚನಗೊಂಡಿತು ಪ್ರಶಾಂತವಾದ ಅಲ್ಲಿನ ವಾತಾವರಣ ಓಡಿಸ ತ್ತದೆ, ಬಸವಕಲ್ಯಾಣ ನಗರದಿಂದ ಇವು ಸ್ವಲ ದೂರದಲ್ಲಿ ಇರುವುದರಿಂದ ಇಲ್ಲಿ ಯಾವುದೆ ಗಲಭೆ–ಗಲೀಜುಗಳಿಲ್ಲ.

ಹಾಗೆಯೇ ಸುತ್ತಾಡುತ್ತ ಹೊರಟರೆ ದೂರದಿಂದಲೇ ಅನುಭವ ಮಂಟಪ ಕಾಣಿಸಿತು ಅದರ ಹತ್ತಿರಕ್ಕೆ ಹೋದಾಗ ಅದರ ಸುತ್ತು ಮುತ್ತಲಿನ ಪರಿಸರದ ಪ್ರಶಾಂತತೆ ಯಾರನ್ನಾ ದರೂ ಸೆಳೆದುಕೊಳ್ಳುತ್ತದೆ. ಈ ಅನುಭವ ಮಂಟಪ ಕಟ್ಟಡವನ್ನು ಇತ್ತೀಚೆಗೆ ಕಟ್ಟಿಸಲಾ ಲಾಗಿದೆ. ಭಾಲ್ಕಿಯ ಪಟ್ಟದ್ದೇವರಾದ, ಪೂಜ್ಯ ಚೆನ್ನಬಸವ ಮಹಾಸ್ವಾಮಿಗಳ ನೇತೃತ್ವದ ಲ್ಲಿಯೇ ಇದನ್ನು ರಚಿಸಲಾಗಿದೆ. ಅಂದಿನ ಅನುಭವ ಮಂಟಪ ಹೇಗಾದರೂ ಇರಲಿ ಕನಿಷ್ಟ ಈಗ ಇಷ್ಟಾದರೂ ಆಗಿದೆಯಲ್ಲ ಎಂದು ಸಮಾಧಾನ ತಂದುಕೊಳ್ಳುತ್ತ ಒಳಹೊದರೆ ಎಲ್ಲ ಶರಣರ ಬೃಹತ್ ಭಾವಚಿತ್ರಗಳನ್ನು ತೂಗುಹಾಕಿದ ಒಂದುದೊಡ್ಡ ಹಾಲ್ ಬರು ತ್ತದೆ. ಅಲ್ಲಿ ವಚನ ಪಿತಾಮಹ ಹಳಕಟ್ಟಿಯ ವರ ಚಿತ್ರವೂ ಇದೆ. ಆದರೆ ಅದೇಕೋ ಅದು ಅಲ್ಲಲ್ಲಿ ಹರಿಮುರಿ ಆಗಿದೆ ! ತಮಾಷೆಯೆಂದರೆ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯವಾದ ಮೇಲೆ ಶೂನ್ಯ ಸಿಂಹಾಸನದ ಮೇಲೆ ಅಲ್ಲಮನ ಬದಲಿಗೆ ಬಸವಣ್ಣನ ಭಾವ ಚಿತ್ರ ಇರಿಸಿದ್ದಾರೆ !

ಒಟ್ಟಿನಲ್ಲಿ ಉಣ್ಣೆಯು ಕೆಚ್ಚಲಲಿದ್ದು ಉಣ್ಣ ದದು ನೊರೆಹಾಲು ಎನ್ನಬಹುದೇ ?

# ದಿಲ್ಲಿ ನಾಯಕ ಸಾನಿಯನ್ನು ಯಾರು ಬಲ್ಲಿರಿ?

● ಡಾ. ಲೋಹಿಯಾ

ಪ್ರಪಂಚದ ರಾಜಧಾನಿಗಳಲೆಲ್ಲ ಅತ್ಯಂತ ಮೋಹಕಳೂ, ಅತ್ಯಂತ ಭ್ರಷ್ಟಳೂ ಆದ ನಾಯಕಸಾನಿ ಡೆಲ್ಹಿ. ಯಾವನೇ ಒಬ್ಬ ಪ್ರಾಮಾಣಿಕ ಪ್ರೇಮಿಗೆ ಈ ತನಕವೂ ಆಕೆ ಪ್ರಾಮಾಣಿಕವಾಗಿ ಒಪ್ಪಿಕೊಂಡದ್ದಿಲ್ಲ. ಹೆಚ್ಚು ಕಡಿಮೆ ಯಾವೊತ್ತೂ ಆಕೆ ಅನಾಮಿಕ ಕ್ರೂರಿಗಳಿಂದ ದಮನಕ್ಕೊಳಗಾಗಿದ್ದಾಳೆ. ಮತ್ತು ಅವನನ್ನೇ ಚಂದದ ನಡುವಳಿಕೆಗೆ ತಿದ್ದಲು, ಸಂಸ್ಕರಿಸಲು ಯತ್ನಿಸಿದ್ದಾಳೆ. ಅವಳು ತನ್ನ ಈ ಕಾರ್ಯದಲ್ಲಿ ಯಾವಾಗಲೂ ದಣಿದದ್ದಿಲ್ಲ. ಹತಾಶಳಾದದ್ದಿಲ್ಲ. ಆಕೆಯ ಪ್ರಕೃತಿಯಲ್ಲಿ ಸತತ ಪ್ರಣಯ ವಿಲಾಸದೊಡನೆ ಕೂಡಿಕೊಂಡ ಸಮ್ಮೋಹತ ಸೊಬಗು ಹಾಗೂ ರೂಕ್ಷವಾದ ಈ ಜಗತ್ತನ್ನು ತನ್ನ ರೋಮವಂತೆ ಸುಂದರಗೊಳಿಸಬೇಕೆಂಬ ತೀವ್ರ ಆಸೆ ಇದೆ.

ಡೆಲ್ಹಿ ಅಪೂರ್ವವಾಗಿದ್ದಾಳೆ. ಪ್ಯಾರಿಸ್‌ನಂತಲ್ಲ, ವಾಶಿಂಗ್‌ಟನ್‌ಗಳಂತಲ್ಲ. ಅಥವಾ ಟೋಕಿಯೋ ದಮಾಸ್ಕಸ್‌ಗಳಂನಲ್ಲ. ಆಕೆ ಈ ಎಲ್ಲದರ ತುಣುಕುಗಳು ಕೂಡಿಕೊಂಡ ಹಾಗಿದ್ದಾಳೆ. ವಿಚಿತ್ರವೆಂದರೆ ಈ ವರೆಗೆ ಈಕೆ ಯಾರೊಬ್ಬನನ್ನು ಪ್ರೇಮಿಯೆಂದು ಸ್ವೀಕರಿಸಿದ್ದೂ ಇಲ್ಲ. ಯಾವುದೇ ಲಾಭಕ್ಕಾಗಲೀ, ಹೃದಯದ ಕ್ಷಣಿಕ ವ್ಯಾಪಾರಕ್ಕಾಗಲೀ ಲಲ್ಲೇಗರೆದದದ್ದಿಲ್ಲ. ತನ್ನ ಮೇಲೆ ಬಲವಂತ ಏರಿ ಬಂದು ಕೂತ ಹೊಸ ಬರ್ಬರನನ್ನು ನಯಗೊಳಿಸುವುದಕ್ಕೆ ನಿರ್ವೀರ್ಯಗೊಳಿಸುವುದಕ್ಕೆ, ಶ್ರದ್ಧೆಯಿಂದ ತನ್ನನ್ನು ಅರ್ಪಿಸಿಕೊಂಡುಬಿಟ್ಟ ಪ್ರಪಂಚದ ನಾಯಕಸಾನಿಯಂತಿದ್ದಾಳೆ. ಈಕೆಯ ಸೊಬಗು ವಿಸ್ಮಯಕಾರಿಯಾದುದು; ಮತ್ತು ಅದೇ ವೇಳೆಗೆ ಶುದ್ಧ ಕೆಡುಕಿನಿಂದ ತುಂಬಿ ಸೂಸುವಂಥದು. ಹೃದಯವೆಂಬ ವಸ್ತು ಇಲ್ಲವೇ ಇಲ್ಲವಾಗಿ ಆಕೆ ಬದುಕುವುದೆಲ್ಲ ಸೌಂದರ್ಯಕ್ಕೋಸ್ಕರ, ನಯಗಾರಿಕೆಗೋಸ್ಕರ, ಚೂರು ಪ್ರಿಯತಮೆಯೂ ಚೂರು ಗರತಿಯೂ, ಚೂರು ದಾರಿ ಸುತ್ತುವ ವ್ಯವಹಾರ ಮನಸ್ಕಳೂ ಆಗಿರುವ ಈಕೆ ಎಲ್ಲರನ್ನೂ ಮೀರಿಸಬಲ್ಲವಳಾಗಿದ್ದಾಳೆ.

ಗೊತ್ತಿಲ್ಲದವರು ಸಾಮಾನ್ಯವಾಗಿ ಇವಳನ್ನು ಏನು ಊಹಿಸುತ್ತಾರೊ? ಸುಮಾರು ಏಳುನೂರೈವತ್ತು ವರ್ಷಗಳ ಹಿಂದಷ್ಟೆ ಇವಳ ಇತಿಹಾಸ ಪ್ರಾರಂಭವಾಗುತ್ತದೆ. ಅದರ ಹಿಂದಿನದೆಲ್ಲ ಪುರಾಣ ಕತೆ. ಮಯನೆಂಬ ದಾನವ ಇಂದ್ರಪ್ರಸ್ಥವೆಂಬ ಮಾಯಾನಗರಿಯನ್ನು ನಿರ್ಮಿಸಿದ ಎಂಬಲ್ಲಿಂದ ಆರಂಭಗೊಳ್ಳುವ ಈ ಮಾಯಾನಗರಿ ಕುರುವಂಶದವರಿಗೆ ಆವಾಸಸ್ಥಾನವಾಗಿತ್ತು. ಹಸ್ತಿನಾಪುರದ ಅನೇಕರಿಗೆ ಅಪಮಾನಕ್ಕೀಡು ಮಾಡಿದ ನೆಲೆಯಾಗಿತ್ತು ಅಲ್ಲಿಂದ ಇದು ಮುಂದೊತ್ತಿಕೊಂಡ ಬಂದ ಎಲ್ಲ ಅನಾಗರಿಕ ವಿಜೇತರಿಗೂ ಏಕೈಕ ಮಹಾದ್ವಾರವಾಯಿತು. ಹೊಸ್ತಿಲಾಯಿತು,

ತನ್ನ ಹತ್ತು ಶತಮಾನಗಳ ಅವಧಿಯ ಇತಿಹಾಸದಲ್ಲಿ ಈಕೆ ಮೂರು ರೀತಿಯ ಕಾರ್ಯವಿಧಾನಗಳನ್ನು ಕಂಡಿದ್ದಾಳೆ, ಒಂದು ತನ್ನಲ್ಲಿಗೆ ಬಂದ ವಿದೇಶೀಯ ದೇಶೀಯನಾಗಿ ಪರಿವರ್ತನೆಗೊಳ್ಳುವುದು, ಇನ್ನೊಂದು ವಿದೇಶಿಯ ದೇಶೀಯನಾಗಲು ತಿರಸ್ಕರಿಸುವುದು, ಮತ್ತೊಂದು ದೇಶೀಯ ತನ್ನ ಈ ದೇಶವನ್ನು ತಾನು ಪಡೆಯಲು ಹೋರಾಡುವುದು.

# ರೈತ ಸಂಘದ ನಿಲುವು ಎಷ್ಟು ಮಟ್ಟಿಗೆ ಸರಿ ?



ಶ್ರೀ ಡಿ. ಬಿ. ಜಿ. ಶೆಟ್ಟಿ

ಮುಂಬರುವ ಲೋಕಸಭಾ ಚುನಾವಣೆಯಲ್ಲಿ ರೈತಸಂಘವು ತಾನು ಯಾವ ಪಕ್ಷದೊಂದಿಗೂ ಸ್ಥಾನ ಹೊಂದಾಣಿಕೆ ಮಾಡಿಕೊಳ್ಳದೆ, ಸ್ವತಂತ್ರವಾಗಿಯೇ ಸ್ಪರ್ಧೆಗಿಳಿಯುತ್ತದೆಂದು ಅದರ ಕಾರ್ಯಾಧ್ಯಕ್ಷರಾದ ಪ್ರೊ. ಎಂ, ಡಿ. ನಂಜುಂಡಸ್ವಾಮಿ ಹೇಳಿದ್ದಾರೆ. ಸ್ವಭಾವತಃ ಹೋರಾಟದ ಮನೋಭಾವದವರಾದ ಪ್ರೊಫೆಸರರಿಗೆ ಚುನಾವಣೆಗಳೆಂದರೆ ಎಲ್ಲಿಲ್ಲದ ಹುರುಪು ತಮ್ಮ ಪಕ್ಷದ ಅಭ್ಯರ್ಥಿಗಳು ಗೆಲ್ಲಲಿ ಬಿಡಲಿ, ಅವರು ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲೂ ತಮ್ಮ ಅಭ್ಯರ್ಥಿಗಳನ್ನು ನಿಲ್ಲಿಸುವವರೇ ! ಆದರೆ ಅದೇನು ಕಾರಣವೋ ಈ ಬಾರಿ ಕೇವಲ ಐದಾರು ಕಡೆಗಳಲ್ಲಿ ಮಾತ್ರ ಅಭ್ಯರ್ಥಿಗಳನ್ನು ನಿಲ್ಲಿಸುತ್ತೇವೆ ಎಂದು ಹೇಳಿದ್ದಾರೆ.

ಯಾವುದೇ ರಾಜಕೀಯ ಪಕ್ಷದ ಜನಪ್ರಿಯತೆ ಗೊತ್ತಾಗುವುದು ಚುನಾವಣಾ ಸಂದರ್ಭದಲ್ಲಿ ಮಾತ್ರ. ಆದ್ದರಿಂದ ಪ್ರೊಫೆಸರರು ಎಲ್ಲಾ ಕಡಗಳಲ್ಲೂ ಅಭ್ಯರ್ಥಿಗಳನ್ನು ನಿಲ್ಲಿಸುವುದರಲ್ಲಾಗಲಿ, ಅಥವಾ ತಮ್ಮ ಆಯಕಟ್ಟಿನ ಐದಾರು ಕಡೆಗಳಲ್ಲಿ ನಿಲ್ಲಿಸುವುದರಲ್ಲಾಗಲೀ ಅಪರಾಧವೇನೂ ಇಲ್ಲ. ಆದರೆ ಅವರು ತಮ್ಮ ಅಭ್ಯರ್ಥಿಗಳನ್ನು ನಿಲ್ಲಿಸುವುದರಿಂದ ಅವರ ಅಭ್ಯರ್ಥಿಗಳು ನೂರಕ್ಕೆ ಐವತ್ತರಷ್ಟಾದರೂ ಗೆದ್ದು ಬಂದರೆ ಅದಕ್ಕೊಂದು ಅರ್ಥವಿರುತ್ತದೆ. ಕಳೆದ ವಿಧಾನಸಭಾ ಚುನಾವಣೆಯಲ್ಲಿ 224 ಜನ ಸದಸ್ಯರಲ್ಲಿ ಆಯ್ಕೆಗೊಂ... ಬಂದವರು ಬಾಬಾಗೌಡ ಪಾಟೀಲರೊಬ್ಬರು ಮಾತ್ರ. ಅದರಲ್ಲೂ ಅವರು ಎರಡು ಕಡೆಗ... ಳಲ್ಲಿ ಗೆದ್ದು ಬಂದುದರಿಂದ ಒಂದು ಕಡೆಯು ಸ್ಥಾನವನ್ನು ತೆರವು ಮಾಡಿಕೊಡಬೇಕಾಯಿತು. ಆ ತೆರವು ಮಾಡಿದ ಸ್ಥಾನದಲ್ಲಿ ಪ್ರೊಫೆಸರ್ ನಂಜುಂಡಸ್ವಾಮಿ ಗೆದ್ದುಬಂದರು. ಈ ಪ್ರಮಾಣ... ನೂರಕ್ಕೆ ಒಂದು ಮಾತ್ರ ಆಯಿತು, ಅಂದ... ಮಾತ್ರಕ್ಕೆ ನೂರಕ್ಕೆ ಒಂದರಷ್ಟು ಗೆದ್ದು ಬರು... ವವರು ಚುನಾವಣೆಗೆ ಸ್ಪರ್ಧಿಸಬಾರದು ಎಂದು ಇದರ ಅರ್ಥವಲ್ಲ. ಹಾಗೆ ಗೆದ್ದು ಹೋದ... ವರು, ಅಲ್ಲಿಗೆ ಹೋದಬಳಿಕ ಹೆಚ್ಚಿಗೆ ಏನನ್ನೂ ಮಾಡಲಿಕ್ಕೆ ಆಗುವುದಿಲ್ಲ, ಏಕೆಂದರೆ ಪ್ರಜಾ... ಪ್ರಭುತ್ವದಲ್ಲಿ ಕಡಿಮೆ ಸಂಖ್ಯೆಗೆ ಯಾವ ಪರಿಗ... ಣನೆ ಸಿಕ್ಕುವುದಿಲ್ಲ. ಈ ಮಾತನ್ನು ಈಗ ಯಾಕೆ ಹೇಳಬೇಕಾಗಿದೆಯೆಂದರೆ ಅಪೂರ್ವ ಸಂಘಟಕ... ರಾದ ರೈತಸಂಘದ ಈ ಅಧ್ವರ್ಯುಗಳು ಹೊರ... ಗಡೆ ಇದ್ದರೆ ಇಷ್ಟೊತ್ತಿಗೆ ಸಂಘಟನೆಯ... ಬಹು ದೊಡ್ಡ ಅಲೆಯನ್ನೇ ಉಂಟು ಮಾಡು... ತ್ತಿದ್ದರು. ಈ ಚುನಾವಣೆಯಲ್ಲಿ ಅರ್ಧದಷ್ಟು ಫಲಿತಾಂಶಗಳಾದರೂ ಇವರ ಪಕ್ಷಕ್ಕೆ ಲಭ್ಯ... ವಾಗುತ್ತಿದ್ದವು. ಹೋಗಲಿ, ಇವರಿಬ್ಬರು ಹೊರಗಡೆ ಇದ್ದು ಬೇರೆ ಇನ್ನಾರನ್ನಾದರೂ ಗೆಲ್ಲಿಸಿ ಕಳಿಸಿದ್ದರೂ ಆಗುತ್ತಿತ್ತು. ಏಕೆಂದರೆ ಇವರೆದುರಿಗೆ ಶಾಸಕತ್ವ ಎನ್ನುವುದು ಒಂದು ಜುಜುಬಿ ಕೆಲಸ. ಈ ಕೆಲಸವಲ್ಲಿ ಇವರ ಶಕ್ತಿ...

ಹರಣ ಆಗೋದು ಅದೊಂದು ಬಗೆಯ ಅಪವ್ಯಯವೇ ಸರಿ !

ಈಗಲೂ ಅಷ್ಟೆ. ಈ ಲೋಕಸಭಾ ಚುನಾವಣೆಗೆ ರೈತಸಂಘ ಅಭ್ಯರ್ಥಿಗಳನ್ನು ನಿಲ್ಲಿಸುವುದರಿಂದ ರೈತಸಂಘಕ್ಕಿಂತ ಇತರ ಪಕ್ಷಗಳಿಗೇ ಹೆಚ್ಚು ಪ್ರಯೋಜನವಾಗುತ್ತದೆ, ಕಾಂಗ್ರೆಸ್‌ಗೆ ಇಂಥ ಪಕ್ಷಗಳು ಎಷ್ಟು ಹೆಚ್ಚು ಸಂಖ್ಯೆಯಲ್ಲಿ ಚುನಾವಣೆಗೆ ನಿಲ್ಲುತ್ತವೆಯೋ ಅಷ್ಟು ಖುಷಿಯಾಗುತ್ತದೆ. ಏಕೆಂದರೆ ಅದನ್ನು ಪ್ರಬಲವಾಗಿ ವಿರೋಧಿಸಬೇಕಾಗಿರುವ ಇತರ ವಿರೋಧ ಪಕ್ಷಗಳು ಎಷ್ಟು ಹೋಳುಗಳಾಗಿ ಒಡೆದು ಹೋಗುತ್ತವೆಯೋ ಅಷ್ಟು ಪ್ರಮಾಣದಲ್ಲಿ ಮತಗಳು ಹಂಚಿ ಹೋಗಿ ಕಾಂಗ್ರೆಸ್ಸಿಗೆ ಜಯ ಸುಲಭವಾಗಿ ಲಭ್ಯವಾಗುತ್ತದೆ. ಕಳೆದ ವಿಧಾನ ಸಭಾ ಚುನಾವಣಾ ಸಂದರ್ಭದಲ್ಲಿ ಆದದ್ದು ಇದೇ. ಕಾಂಗ್ರೆಸ್ ತಾನು ಹುಟ್ಟಿದ ದಿನದಿಂದ


ಬಾಬಾಗೌಡ ಪಾಟೀಲ

ಈವರೆಗೂ ಇಷ್ಟೊಂದು ಬಹುಮತ ಪಡೆದು ಆಳ್ವಿಕೆ ನಡೆಸಿರಲಿಲ್ಲ. ಈ ಸಲ ಕಾಂಗ್ರೆಸ್ ವಿಪುಲ ಸಂಖ್ಯೆಯಲ್ಲಿ ಗೆದ್ದು ಬಂದಿರುವುದಕ್ಕೆ ಇರುವ ಒಂದೆರಡು ಕಾರಣಗಳಲ್ಲಿ ರೈತಸಂಘ ಚುನಾವಣೆಗೆ ಸ್ಪರ್ಧಿಸಿದ್ದೂ ಒಂದು, ಜನತಾದಳ, ಬಿಜೆಪಿ, ಇತ್ಯಾದಿಗಳಿಗೆ ಹಂಚಿ ಹೋಗುತ್ತಿದ್ದ ಮತಗಳನ್ನು ರೈತಸಂಘ ತನ್ನ ಕಡೆಗೆ ಸೆಳೆದುಕೊಂಡಿತು. ಕಳೆದಸಲ ಐವತ್ತರವತ್ತು ಸ್ಥಳಗಳಲ್ಲಿ ಜನತಾದಳ ಕೆಲವೇ ಮತಗಳ ಅಂತರದಲ್ಲಿ ಆ ಸ್ಥಾನವನ್ನು ಕಾಂಗ್ರೆಸಿಗೆ ಬಿಟ್ಟುಕೊಟ್ಟಿತು. ಆ ಕೆಲವು ಮತಗಳನ್ನು ರೈತಸಂಘ ಅದರಿಂದ ಕಿತ್ತುಕೊಂಡಿತ್ತು. ಎಲ್ಲೆಲ್ಲಿ ರೈತಸಂಘ ತನ್ನ ಅಭ್ಯರ್ಥಿಗಳನ್ನು ಸ್ಪರ್ಧೆಗಿಳಿಸಿತ್ತೋ ಅಲ್ಲೆಲ್ಲ ಕಾಂಗ್ರೆಸ್ ಸುಲಭವಾಗಿ ಗೆಲುವು ಪಡೆದಿದೆ, ಕಾಂಗ್ರೆಸನ್ನು ಗೆಲ್ಲುವಂತೆ ಮಾಡುವುದಕ್ಕೆ ರೈತಸಂಘ ಸುತರಾಂ ಇಚ್ಛಿಸಿರಲಾರದು. ಆದರೆ ಆದದ್ದು ಮಾತ್ರ ಅದೇ ಆಗಿತ್ತು.

ರೈತಸಂಘದ ನಿಲುವಿನಲ್ಲಿ ಎಲ್ಲ ರಾಜಕೀಯ ಪಕ್ಷಗಳೂ ಒಂದೇ. ಅವೆಲ್ಲವನ್ನೂ ಧರೋಡೆಖೋರರ ಗುಂಪುಗಳೆಂದೇ ಅದು ಕರೆಯುತ್ತದೆ. ರೈತಸಂಘದ ಈ ಅಂಬೋಣವನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಏಕೆಂದರೆ ರಾಜಕೀಯ ಪಕ್ಷಗಳು ಎಂದು ಕರೆಸಿಕೊಳ್ಳುವ ಈ ಕೂಟಗಳು ಒಂದಿಲ್ಲೊಂದು ಬಂಡವಾಳ ಸಂಸ್ಥೆ ಅಥವಾ ವ್ಯಕ್ತಿಗಳಿಗೆ ಒತ್ತೆ ಬಿದ್ದುವುಗಳೇ ಆಗಿವೆ. ಹೀಗಾಗಿ ಈ ಕೂಟಗಳು ಗೆದ್ದು ಬಂದ ಬಳಿಕವೂ ಜನಸಾಮಾನ್ಯರಿಗಾಗಿ ಕೆಲಸ ಮಾಡದೆ, ತಾವು ಒತ್ತೆಬಿದ್ದ, ವ್ಯಕ್ತಿ ಸಂಸ್ಥೆಗಳಿಗೇ ಹೆಚ್ಚು ಸಮಯ ಮೀಸಲಿಟ್ಟು, ದುಡಿಯುತ್ತವೆ. ಇದರಿಂದಾಗಿಯೇ ದೇಶ ಹಿಂದೆ ಬಿದ್ದು, ಇಂಥ ರಾಜಕೀಯ ಪಕ್ಷ ಪಂಗಡಗಳನ್ನು ಆಡಿಯಾಳಾಗಿಟ್ಟುಕೊಂಡ ವ್ಯಕ್ತಿ ಸಂಸ್ಥೆಗಳೇ ಬೆಳೆದು ಬಲಶಾಲಿಗಳಾಗುತ್ತವೆ. ನಾಲ್ಕುವರೆ ದಶಕ ತಲುಪುತ್ತಿದ್ದರೂ ನಾವು ಹಿಂದುಳಿದಿರುವುದಕ್ಕೆ ಇದು ಮುಖ್ಯ ಕಾರಣ. ದೇಶದ ದುಸ್ಥಿತಿಗೆ ಇರುವ ಈ ಕಾರಣಗಳನ್ನು ರೈತಸಂಘ ಸರಿಯಾಗಿಯೇ ಗುರುತುಮಾಡಿಕೊಂಡಿದೆ, ನಿಜ! ಆದರೆ ಇನ್ನೂ ಆರಂಭದ ಅವಸ್ಥೆಯಲ್ಲಿರುವ

ರೈತಸಂಘ ಚುನಾವಣೆಗೆ ಸ್ಪರ್ಧಿಸುವುದರಿಂದ ಲಾಭಕ್ಕಿಂತ ಹಾನಿಯೇ ಹೆಚ್ಚು. ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಹುಚ್ಚೆದ್ದು ಕುಣಿಯುತ್ತಿರುವ ಕಾಂಗ್ರೆಸ್‌ಗೆ ಇದು ಇನ್ನಷ್ಟು ಕುಮ್ಮಕ್ಕು ಕೊಟ್ಟಂತಾಗುತ್ತದೆ, ಈ ಮಾತನ್ನು ಬರೀ ರೈತಸಂಘಕ್ಕೆ ಮಾತ್ರ ಅನ್ವಯಿಸಿ ಹೇಳುತ್ತಿಲ್ಲ. ಕಾಂಗ್ರೈಗೆ ವಿರೋಧವಾಗಿ ವರ್ತಿಸುತ್ತಿರುವ ಇತರ ಪಕ್ಷಗಳಾದ ಜನತಾದಳ, ಬಿಜೆಪಿ, ಜನತಾದಳ (ಎಸ್) ಇತ್ಯಾದಿಗಳೆಲ್ಲವೂ ತಮ್ಮ ತಮ್ಮಲ್ಲಿಯೇ ಮತಗಳನ್ನು ಹಂಚಿಕೊಂಡು ಮತ್ತೆ ಕಾಂಗ್ರೈಗೆ ಜಯಭೇರಿಯನ್ನು ತಂದು ಕೊಡುತ್ತವೆ. ಒಂದಕ್ಕಿಂತ ಹೆಚ್ಚು ಪಕ್ಷಗಳು ತನ್ನೊಂದಿಗೆ ಸೆಣದಾಡಿದಾಗಲೆಲ್ಲ, ದಿಲ್ಲಿಯ ಆಳ್ವಿಕೆ ಕಾಂಗ್ರೈಗವು ಕೈಗೆ ಬಹು ಸುಲಭವಾಗಿ ದಕ್ಕಿದೆ !

ರೈತಸಂಘ ಸಧ್ಯ ಚುನಾವಣೆಯ ಮಟ್ಟಿಗಾದರೂ ಇತರ ವಿರೋಧ ಪಕ್ಷಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಕಾಂಗ್ರೈ ಅನ್ನು ವಿರೋಧಿಸಬೇಕು. ನಂಜುಂಡಸ್ವಾಮಿಯವರ ಮಾತುಗಳನ್ನು ಗಮನಿಸಿದರೆ ರೈತಸಂಘ ಯಾರೊಂದಿಗೂ ಸೇರುವಂತೆ ಕಾಣಿಸುತ್ತಿಲ್ಲ. ಬಿಜೆಪಿ ಈ ಬಗ್ಗೆ ಆಸಕ್ತಿ ತೋರಿದ್ದರೂ ನಂಜುಂಡಸ್ವಾಮಿ ಎಂದಿನ ತಮ್ಮ ಕಠೋರ ಮಾತುಗಳ ಮೂಲಕ ನಿರಾಕರಿಸಿದ್ದಾರೆ. ಅದೇ ಥರ ಜನತಾದಳದವರೊಂದಿಗೂ ಯಾವುದೇ ಮಾತುಕತೆ ಸಾಧ್ಯವಿಲ್ಲವೆಂದು ಅವರು ಖಡಾ ಖಂಡಿತ ಹೇಳಿಬಿಟ್ಟಿದ್ದಾರೆ. ಸಾಧ್ಯವಾಗುವುದಾದರೆ "ದೈಹಿಕ ಮಾತುಕತೆ" ಆಡೋಣ ಎಂತಲೂ ಅವರು ಹೇಳಿದ್ದಾರೆ, ಹೀಗಾಗಿ ಅವರಿಗೆ ಯಾರೊಂದಿಗೂ ಹೊಂದಾಣಿಕೆ ಸಾಧ್ಯವಾಗುವಂತೆ ತೋರುವುದಿಲ್ಲ.

ಕ್ಯಾನ್ಸರ್, ಕ್ಷಯ, ನೆಗಡಿ, ಕೆಮ್ಮು ಮುಂತಾದ ರೋಗಗಳು ಏಕಕಾಲಕ್ಕೆ ಬಂದಿದ್ದರೆ ನಾವು ಮೊದಲು ಚಿಕಿತ್ಸೆ ನಡೆಸುವುದು ಕ್ಯಾನ್ಸರ್‌ಗೆ ಮಾತ್ರ. ಆಮೇಲೆ ಕ್ಷಯ. ನೆಗಡಿ ಕೆಮ್ಮುಗಳ ಸರದಿ. ಆಮೇಲೆ ಅದರಂತೆ ಈ ದೇಶದ ತುಂಬ ವ್ರಣವಾಗಿ ಹಬ್ಬಿರುವ ಕಾಂಗ್ರೈಯನ್ನು ತೊಡೆಯಬೇಕಿದ್ದರೆ, ಮೊದಲು ಮೊದಲು ನಾವು ಅದರ ವಿರುದ್ಧವೇ ಹೋರಾಡಬೇಕಾಗುತ್ತದೆ. ನೆಗಡಿ ಕೆಮ್ಮುಗಳನ್ನು ಜೊತೆಗೆ ಇಟ್ಟುಕೊಂಡೇ ನಾವು ಅದರ ಚಿಕಿತ್ಸೆಯನ್ನು ಮಾಡಬೇಕಾಗುತ್ತದೆ. ಅದು ಬಿಟ್ಟು, ನೆಗಡಿ ಕೆಮ್ಮಿನ ಔಷಧಿಯನ್ನೇ ತಿನ್ನುತ್ತ ಕುಳಿತರೆ ಕ್ಯಾನ್ಸರ್ ಆ ವ್ಯಕ್ತಿಯನ್ನೇ ಕಬಳಿಸಿಬಿಡುತ್ತದೆ. ಆಗ ನಾವು ಏನು ಮಾಡಿದರೂ ಪ್ರಯೋಜನವಾಗುವುದಿಲ್ಲ.

ಆದ್ದರಿಂದ ರೈತಸಂಘ ಯಾರೊಂದಿಗೂ ಸ್ಥಾನ ಹೊಂದಾಣಿಕೆ ಮಾಡಿಕೊಳ್ಳದಿರುವುದು ದೇಶದ ಹಿತದೃಷ್ಟಿಯಿಂದ ಅಪಾಯಕಾರಿಯಾದ ನಿಲುವೇ ! ಇನ್ನೊಂದರ್ಥದಲ್ಲಿ ಹೇಳಬಹುದಾದರೆ ಅಪರೋಕ್ಷವಾಗಿ ಇದು ಕಾಂಗ್ರೈಗಳ ಗೆಲುವಿನ ಕಡೆಗೇ ಇದೆಯೆಂದು ಹೇಳಬೇಕಾಗುತ್ತದೆ.

○ ಸಿದ್ಧರಾಮ ಉಪ್ಪಿನ

---

**ಕರ್ಣ**

ಕುಂತಿದೇವಿಯ
ಕಿವಿಯೊಳಗಿನ
ಕೂಕಣಿ
—ನಬಿಲಾಲ ಅಮ್ಮಾಪೂರ

# *ಶ್ರೀ ಬಸವೇಶ್ವರರಿಗೆ



◯ ರಾಷ್ಟ್ರಕವಿ ಕುವೆಂಪು

ಕಾರ್ತಿಕ ಕತ್ತಲಲಿ ಆಕಾಶ ದೀಪವಾಗಿ
ನೀ ಬಂದೆ,
ಬಟ್ಟೆ ಗೆಟ್ಟವರಿಗೊಂದು ದೊಂದಿ ದಿಕ್ಕಾಗಿ
ಎಂಟು ಶತಮಾನಗಳ ಹಿಂದೆ,

ಅಗ್ನಿ ಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿ ವೀರ,
ದೇವದಯೆಯೊಂದು ಹೇ ಧೀರಾವತಾರ,
ಶ್ರೀ ಬಸವೇಶ್ವರಾ ।

ಜಾತಿ ಪದ್ಧತಿಯ ಹೋಮ ಕೂಪಕ್ಕೆ
ಬಿದ್ದು ವೈದಿಕರ ಯಜ್ಞತಾಪಕ್ಕೆ
ಬಲಿವೋದ ದಲಿತ ಜೀವರನೆತ್ತಿ ಮತಿ ವಿಚಾರಕ್ಕೆ
ಕಾಯಕದ ದಿವ್ಯತತ್ತ್ವದ ಸುಕ್ಷೇಮ ಧರ್ಮನಾಕಕ್ಕೆ
ನಡೆಸಿದ ಮಹಾತ್ಮನೆ, ನಿನಗೆ ನಮೋ ನಮಃ

ಇಂದಿಗೂ ನಾವು ನಿನ್ನೆತ್ತರಕೆ ಏಳಲಾರದೆ ಅಯ್ಯೊ
ಮತದ ಉಸುಬಿಗೆ ಸಿಲುಕಿ ತತ್ತರಿಸುತಿಹೆವಯ್ಯ !
ಬಾರಯ್ಯ, ಕೈಹಿಡಿದೆತ್ತಿ ಬದುಕಿಸು ನಮ್ಮನೆಳೆದು
ವರ್ಣಾಶ್ರಮದ ಹೆಸರ ಹೊಲೆಗೆಸರ ವಂಚನೆಯ ಕುಂಡದಿಂದೆ
ಭಕ್ತಿಗಂಗೆಯನೆರೆದು
ಭಾಗವತ ಶಕ್ತಿಯಂ ಕರೆದು
ಮತ ಮೌಢ್ಯದಜ್ಞಾನ ಪಂಕವನು ತೊಳೆದು
ಶುಚಿಗೊಳಿಸು ವಿಜ್ಞಾನ ವೇದಾಂತ ತೀರ್ಥದಿಂದೆ !

---

* ಮೇ 15
ಬಸವ ಜಯಂತಿ ನಿಮಿತ್ತ

# “ಅಗರಖೇಡ ಮಂಡಲದ ಎನ್. ಸಿ. ಬಿರಾದಾರ್ ಪಾಟೀಲ”



ಇವೊತ್ತು ಯಾವುದಾದರೂ ಮಂಡಲ ಪಂಚಾಯತಿ ಮಾದರಿ ಪಂಚಾಯತಿ ಅಂತ ಹೆಸರಾಗಿದ್ದರೆ ಕೂಡಲೇ ಅಲ್ಲಿಯ ಪ್ರಧಾನ ಯಾರು ಅಂತ ಕೇಳುತ್ತಾರೆ, ಆದರೆ ನಿಜಕ್ಕೂ ಅದು ಹಾಗೆ ಹೆಸರು ಪಡೆಯುವುದಕ್ಕೆ ಹೆಚ್ಚು ಶ್ರಮಿಸಿದ ವ್ಯಕ್ತಿ ಅಲ್ಲಿಯ ಕಾರ್ಯದರ್ಶಿ ಆಗಿರುತ್ತಾನೆ. ಇಂಥವರಲ್ಲಿ ಇಂಡಿ ತಾಲೂಕಿನ ಅಗರಖೇಡ ಮಂಡಲದ ಕಾರ್ಯದರ್ಶಿ ಎನ್. ಸಿ. ಬಿರಾದಾರ್ ಪಾಟೀಲ್ ಒಬ್ಬರು. ಕರ್ನಾಟಕ ಮಹಾರಾಷ್ಟ್ರದ ಸೀಮಾರೇಖೆಯಲ್ಲಿರುವ ಈ ಅಗರಖೇಡ್, ಪ್ರಖ್ಯಾತ ನಾಟಕಕಾರ ಶ್ರೀರಂಗರ ಹುಟ್ಟೂರಾದರೂ ಯಾವುದೇ ಪ್ರಗತಿ ಕಂಡಿರಲಿಲ್ಲ,

ಕೆಲಸಗಾರನಾದ ವ್ಯಕ್ತಿಗೆ ಇಂಥ ಊರುಗಳೇ ಒಂದು ಸವಾಲು, ಅಂದಂತೆ ಕಾರ್ಯದರ್ಶಿ ಪಾಟೀಲ ಮಾಡಿದ ಕೆಲಸಗಳು ಹಲವಾರು ಮಂಡಲ ಪಂಚಾಯತಿ, ಜಿಲ್ಲಾ ಪರಿಷತ್ತುಗಳ ಯೋಜನೆಗಳು ತುಂಬಾ ಯೋಗ್ಯವಾದ ಯೋಜನೆ ಎಂದೊಪ್ಪಿಕೊಳ್ಳುವ ಪಾಟೀಲ್ ಇವನ್ನು ಜಾರಿಗೆ ತರುವಲ್ಲಿ ಅನೇಕರು ತಪ್ಪುತ್ತಿದ್ದಾರೆ ಎಂದು ವಿಷಾದಿಸುತ್ತಾರೆ. ಮನಸ್ಸಿದ್ದವನಿಗೆ ಎಂಥ ಕಾಳಕತ್ತಲೆಯಲ್ಲೂ ದಾರಿ ಕಾಣಿಸಿಕೊಳ್ಳುತ್ತದೆ ಎಂಬ ವಿಶ್ವಾಸ ಹೊಂದಿರುವ ಈತ ಇಲ್ಲಿಗೆ ಬಂದ ಒಂದು ಒಂದೂವರೆವರ್ಷದಲ್ಲಿ ಮಾಡಿದ ಕೆಲಸಗಳು ಹಲವಾರಿವೆ.

ಜವಾಹರ ರೋಜಗಾರ ಯೋಜನೆ ಅನೇಕರಿಗೆ ಹಜಾಮತಿ ಮಾಡುವುದಕ್ಕೆ ಅನುಕೂಲವಾಗಿದ್ದರೆ, ಈ ಬಿರಾದಾರ್ ಪಾಟೀಲರಿಗೆ ಜನಕಲ್ಯಾಣ ಕಾರ್ಯಕ್ರಮದ ಬಹು ಮುಖ್ಯ ಯೋಜನೆಯಾಗಿದೆ. ಅವರ ಅಡಿಯಲ್ಲಿ ಅಗರಖೇಡ್‌ದಲ್ಲಿ 6 ಕೋಣೆಗಳ ಶಾಲಾಕಟ್ಟಡ ಹಿರೇಬೇವನೂರಿನಲ್ಲಿ ಎರಡು ಕಟ್ಟಡ, ಚಿಕ್ಕಮಣ್ಣೂರಲ್ಲಿ ಎರಡು ಸಮಾಜ ಮಂದಿರ, ತಾಂಡಾದಲ್ಲಿ ಬಸ್ ಶೆಲ್ಟರ್, ಅಗರಖೇಡ್‌ದಿಂದ ಪಡ್ನೂರ್, ಬಯಾರ್‌ವರೆಗೆ ಗ್ರಾಮೀಣರಸ್ತೆ ಶಿರಗೂರು ಗಚ್ಚಿವಾಡಲ್ಲಿ ಅಂಗನವಾಡಿ ಕಟ್ಟಡ, ಮತ್ತೆ ಕಪ್ಪುಹಲಗೆ ಕಾರ್ಯಕ್ರಮದಲ್ಲಿ ಏಳು ಕಟ್ಟಡ. ಎಲ್ಲ ಹಳ್ಳಿಗಳಿಗೂ ವಿದ್ಯುದ್ದೀಪ, ಅಗರಖೇಡ್, ಹಿರೇಬೇವನೂರ್ ಮತ್ತು ಚಿಕ್ಕಮಣೂರ್‌ಗಳಲ್ಲಿ ಮಹಿಳೆಯರಿಗಾಗಿ ಶೌಚಾಲಯ, 90 ಜನ ಫಲಾನುಭವಿಗಳಿಗೆ ಸಾಲವಿತರಣೆ ಅಗರಖೇಡ್ ಹಾಗೂ ಚಿಕ್ಕಮಣೂರುಗಳಲ್ಲಿ ತಲಾ 21 ಹಾಗೂ 9 ಗುಂಪು ಮನೆಗಳು ಇಂದಿರಾ ಆವಾಸ್‌ದಲ್ಲಿ ಚಿಕ್ಕಮಣೂರಿನಲ್ಲಿ 10, ಬೇವನೂರ ತಾಂಡೆಯಲ್ಲಿ 10, ಹುಡ್ಕೋ ಯೋಜನೆಯಲ್ಲಿ ಅಗರಖೇಡದಲ್ಲಿ 10 ಇತ್ಯಾದಿಗಳ ಜೊತೆಗೆ ಒಂದು ಲಕ್ಷ ಬೆಲೆ ಬಾಳುವಒಂದು ಲಕ್ಷ ರೂಪಾಯಿಯ ಪಂಚಾಯತಿ ಕಾರ್ಯಾಲಯ 1 ದನದ ದವಾಖಾನೆ ಹೀಗೆ ಒಂದೇ ಎರಡೇ?

# ಆಕಳಿಸುತ್ತಿದ್ದ ಬೆಕ್ಕು ಹಾಗೂ ಕೇದಾರದ ಜಗದ್ಗುರು

● ಸತ್ಯಂಪೇಟೆ ಲಿಂಗಣ್ಣ



ನನ್ನ ಕೆಲವು ಗೆಳೆಯರು ವಿರೋಧಿಸುವಂತೆ ನಾನು ಗುರುಜಗದ್ಗುರುಗಳನ್ನು ಅಷ್ಟೊಂದು ನಖಶಿಖಾಂತವಾಗಿ ವಿರೋಧಿಸುವುದಿಲ್ಲ. ಏಕೆಂದರೆ ಈ ಗುರು ಜಗದ್ಗುರು ಎನ್ನುವವರು ಈ ವ್ಯವಸ್ಥೆಯ ಒಂದು ಭಾಗವೇ ಆಗಿರುವುದರಿಂದ ಅವರೊಂದಿಗೆ ವೈಯ್ಯಕ್ತಿಕವಾಗಿ ವಿರೋಧಿಸಿ ಪ್ರಯೋಜನವಿಲ್ಲ. ವ್ಯವಸ್ಥೆ ಬದಲಾದರೆ ಅವರು ತಮಗೆ ತಾವೇ ಬದಲಾಗುತ್ತಾರೆ. ನಮ್ಮ ಬೇಸರ ಅದೇನೇ ಇದ್ದರೂ ವ್ಯವಸ್ಥೆಯ ಬಗೆಗೆ ಇರಬೇಕೆ ಹೊರತು ವೈಯ್ಯಕ್ತಿಕವಾಗಿ ಅಲ್ಲ.

ಆದ್ದರಿಂದ ನಾನಿರುವ ಶಹಾಪುರಕ್ಕೆ ಗುರು ಜಗದ್ಗುರುಗಳು ಬಂದರೆ ಅವರನ್ನು ಕಾಣಲು ಹೋಗುವುದು ನನಗೆ ಅನಿವಾರ್ಯ. ಅದರಲ್ಲೂ ಪತ್ರಿಕೆಯ ಕೆಲಸಕ್ಕಾಗಿ ಯಾರ್‍ಯಾರನ್ನೋ ಕಾಣಬೇಕಾಗಿ ಬರುವ ನನಗೆ ಈ ಗುರು ಜಗದ್ಗುರುಗಳೇನೂ ಅಂಥ ನಿಷಿದ್ಧ ವ್ಯಕ್ತಿಗಳಲ್ಲವಲ್ಲಾ! ಹಾಗಾಗಿ ಅವರನ್ನು ಕೆಲ ಗೆಳೆಯರೊಂದಿಗೆ ಕಾಣಲು ಹೋದರೆ ಆಗ ಮಧ್ಯಾಹ್ನದ ಮೂರು ಗಂಟೆಯಾಗಿತ್ತು. ಜಗದ್ಗುರುಗಳು ಪವಡಿಸಿರಬಹುದಾದ ಸಮಯ ಎಂದುಕೊಂಡಿದ್ದೆ. ಆದರೆ ಅವರು ಆವೇ ಆಗ ಪೂಜೆ ಮುಗಿಸಿಕೊಂಡು ಬಂದಂತೆ ಕಾಣುತ್ತಿದ್ದರು. ಆ ಪೂಜಾಯಾಸದ ಕಳೆ ಅವರ ಮುಖದ ಮೇಲೆ ಕಾಣುತ್ತಿತ್ತು. ಮಂಚದ ಮೇಲೆ ಧ್ಯಾನಮುದ್ರೆಯಲ್ಲಿ ಕುಳಿತಿದ್ದ ಅವರು ಕಣ್ಣುಮುಚ್ಚಿ ಜಪಮಣಿ ಎಣಿಸುತ್ತಿದ್ದರು. ಅವರ ಆ ಧ್ಯಾನ ಮುದ್ರೆಯನ್ನು ಬಿಟ್ಟ ಕಣ್ಣಿಂದ ನೋಡುತ್ತ, ಅವರ ಆ ಅದ್ಭುತ ಭಂಗಿಗೆ ಬೆರಗುಪಡುತ್ತ ಹತ್ತಿಪ್ಪತ್ತು ಜನ ಭಕ್ತಾಗ್ರಣಿಗಳು ಕುಳಿತಿದ್ದರು. ನಾವೆಲ್ಲ ಒಳಕ್ಕೆ ಹೋಗುತ್ತಿದ್ದಂತೆ, ತಟ್ಟನೆ ಕಣ್ಣುಬಿಟ್ಟ ಅವರು ಪುನಃ ಕಣ್ಣುಮುಚ್ಚಿ ಅದೇ ಧ್ಯಾನಭಂಗಿಗೆ ಇಳಿದರು; ಸ್ವಲ್ಪ ಹೊತ್ತಿನ ಮೇಲೆ ತಾವೇ ಕಣ್ಣುಬಿಟ್ಟರು;

ಅಲ್ಲಿ ಜಮಾಯಿಸಿದವರಲ್ಲೊಬ್ಬರು ನನ್ನನ್ನು ಗುರುತು ಹಿಡಿದು ನನ್ನನ್ನು ಆ ಜಗದ್ಗುರುಗಳಿಗೆ ಪರಿಚಯಿಸಿದರು. ಅದಕ್ಕೆ ಅವರು "ಗೊತ್ತು ! ನನಗೆ ಅವರೆಲ್ಲ ಗೊತ್ತು!" ಎಂದರು, ನನಗೆ ವಿಚಿತ್ರವೆನಿಸಿತು, "ಆಗಲೇ ಇವರು ನನ್ನನ್ನು ಹೇಗೆ ಗೊತ್ತು ಮಾಡಿಕೊಂಡರಪ್ಪ" ಎಂದು ವಿಸ್ಮಯದಿಂದ ಗಮನಿ

ಸುತ್ತಿದ್ದಂತೆ ಅವರು ಮತ್ತೊಮ್ಮೆ ಕಣ್ಮುಚ್ಚಿ ಏನನ್ನೋ ಧೇನಿಸಿ, ಜಪಮಣಿ ಸರ ಎಣಿಸುತ್ತ–

"ನಮಗೆ ಇವರೆಲ್ಲ ಯಾರು ? ಎತ್ತ ? ಅಂತ ಎಲ್ಲಾ ಗೊತ್ತಾಗುತ್ತವೆ !" ಅಂತ ಬೂಸಿ ಕುಟ್ಟಿದರು. ಆಮೇಲೆ ತಾವೊಬ್ಬ ತ್ರಿಕಾಲ ಜ್ಞಾನಿಯೋ ಎಂಬಂತೆ ಪೋಜು ನೀಡಿದರು. ನನಗೆ ಇದೆಲ್ಲ ವಿಚಿತ್ರವೆನಿಸಿತು.

ತಕ್ಷಣವೇ "ಸ್ವಲ್ಪ ತಡೆಯಿರಿ ಮುಖ ತೊಳೆದು ಬರುತ್ತೇನೆ" ಎಂದು ಹೇಳಿ ಒಳಕ್ಕೆ ಹೋದರು. ಅವರು ಮರಳಿ ಬರುವ ಹೊತ್ತಿಗೆ, ಅಲ್ಲಿ ಜಮಾಯಿಸಿದ್ದ ಭಕ್ತಾಗ್ರಣಿಗಳೆಲ್ಲ ಒಬ್ಬೊಬ್ಬರಾಗಿ ಎದ್ದು ಹೋಗಿದ್ದರು. ಉಳಿದವರು ನಾವು ಮೂವರು, ಹಾಗೂ ಅವರೊಬ್ಬರು ಮಾತ್ರ ! ಮತ್ತೆ ಅದೇ ಠೀವಿಯಲ್ಲೇ ಕುಂತರು.

ಎಡಗೈಯಿಂದ ಗಡ್ಡ ನೀವಿಕೊಳ್ಳುತ್ತ, ಬಲಗೈಯಿಂದ, ಹಣೆ ತೋಳು, ಕುತ್ತಿಗೆ ಮುಂತಾದೆಡೆಗಳಲ್ಲಿ ಭಸ್ಮ ಹಚ್ಚಿಕೊಳ್ಳುತ್ತಿದ್ದ ಆ ಜಗದ್ಗುರುವನ್ನು ನಾನು ಗಮನಿಸಿದೆ, ಕೊರಳಲ್ಲಿ ದೊಡ್ಡ ರುದ್ರಾಕ್ಷಿ ಮಾಲೆ, ಕೈಮಣಿ ಕಟ್ಟಿಗೆ ರುದ್ರಾಕ್ಷಿಯ ಜೊತೆಗೆ ಹೂಹಾರ ಸುತ್ತುವರಿದಿದ್ದರೆ, ನೆತ್ತಿಯಮೇಲೆ ಎತ್ತಿಕಟ್ಟಿದ ಜುಟ್ಟಕ್ಕೆ ಮಾತೆ ಮಹಾದೇವಿಯ ಶೈಲಿಯಲ್ಲಿ ಹೂಹಾರ ವೊಂದನ್ನು ಕಟ್ಟಲಾಗಿದೆ; ಇನ್ನು 35–40ರ ಹರೆಯದಲ್ಲಿರುವ ಈ ಜಗದ್ಗುರು ಕರ್ರಗೆ ಹೊಳೆಯುತ್ತಾರೆ. ಆಗ ಅವರ ನಮ್ಮ ನಡುವೆ ನಡೆದ ಮಾತಿನ ವಿವರ ಹೀಗಿದೆ.

ನಾನು– "ಬಹಳ ದೂರದ ಕೇದಾರದಿಂದ ಇಲ್ಲಿಗೆ ಬಂದಿದ್ದೀರಿ, ಇದರಿಂದ ನಿಮಗೆ ಆಯಾಸ ಆಗಿರಬಹುದಲ್ಲವೆ ?"

ಜಗದ್ಗುರು– "ಇಲ್ಲ! ನಾವು ಕೇದಾರ ಬಿಟ್ಟು ಬಂದು ಭಾಳ ದಿನಾ ಆತು. ವರ್ಷದಾಗ ನಾವು ಅಲ್ಲಿರೋದು ಕೇವಲ ಹತ್ತಾರು ದಿನ ಮಾತ್ರ ಉಳಿದಾಗೆಲ್ಲ ನಾವು ಹೆಚ್ಚಾಗಿ ಹೀಗೆ ಪ್ರವಾಸದಲ್ಲೆ ಇರ್ತೀವಿ."

ಅವರ ಈ ಕನ್ನಡದ ಸ್ಪಷ್ಟ ಉಚ್ಚಾರ ಇತ್ಯಾದಿ ತಿಳಿದ ನಾನು ಕೇದಾರದಲ್ಲಿದ್ದವರು ಎಷ್ಟು ಚೆನ್ನಾಗಿ ಕನ್ನಡ ಕಲಿತಿದ್ದಾರಲ್ಲ ಅಂತ ಸಂತೋಷಪಡುತ್ತಿದ್ದೆ. ಅಷ್ಟರಲ್ಲಿ ಅವರೇ ತಾವು ವಿಜಾಪುರ ಜಿಲ್ಲೆಯ ಗೋಡ್ರಿಹಾಳದವರು ಎಂದು ಹೇಳಿಕೊಂಡರು.

"ಈಗನಿಮ್ಮ ಖಾಯಂ ಠಿಕಾಣೆ ಎಲ್ಲಿ?"

"ಮಹಾರಾಷ್ಟ್ರದ ಅಂಬಾ ಜೋಗಾಯಿ ದಲ್ಲಿ!"

"ಅಲ್ಲಿ ಕುಂತು ನೀವು ಏನು ಮಾಡುತ್ತಿರಿ ?"

"ಧ್ಯಾನ ತಪಸ್ಸು,ಯೋಗ ಮುಂತಾದ್ದು"

"ಇದರಿಂದ ನೀವು ಸಾಧಿಸಿದ್ದು ಏನು ?"

"ನಮಗೆ ಜನ್ಮ ಪುನರ್‌ಜನ್ಮದ ಎಲ್ಲಾ ಸದೂಚಾರ ಗೊತ್ತಾಗ್ತವೆ!"

"ಅಂಥ ಯಾವುದಾದರೂ ಉದಾಹರಣೆ ಹೇಳಿ" ಎಂದುದೊಂದೇ ತಡ! ಜಗದ್ಗುರುಗಳು, ತಮ್ಮ ತಪೋ ಸಿದ್ಧಿಯ ಬಲಾಬಲವನ್ನೆಲ್ಲ ನಮ್ಮ ಮುಂದೆ ಬಿಚ್ಚಿಡಲು ಪ್ರಯತ್ನಿಸಿದರು. ಇಂಥ ಕಣ್ಕಟ್ಟು ಮಾತುಗಳ ಬಗ್ಗೆ ಒಂದಷ್ಟೂ ವಿಶ್ವಾಸವಿಲ್ಲದಿದ್ದರೂ ಸುಮ್ಮನೆ ಅವರಿಗೆ ಪ್ರಶ್ನೆ ಮಾಡಿದೆ. ಆಗಲಂತೂ ಅವರು ಒಬ್ಬ ಜಾದೂಗಾರನ ಶೈಲಿಯಲ್ಲಿ ತಮ್ಮ ಪವಾಡಗಳನ್ನೆಲ್ಲ ವಿವರಿಸತೊಡಗಿದರು. ಅಂಬಾಯ್ ಜೋಗಾ

ಯಾದಿಂದ 60 ಕಿ. ಮೀ. ಆಚೆಗಿರುವ ಡೋಕಿ ಕಾರ್ಖಾನೆಯ ಮಾಲಿಕ ತನ್ನ ಹೆಂಡತಿಯೊಂದಿಗೆ ಬಂದು ಇವರನ್ನು ಕಂಡರಂತೆ, ತಮಗೆ ಹೆಣ್ಣು ಮಗು ಬೇಕು ಅಂವರಂತೆ. ಆಗ ಇವರು ತಮ್ಮ ಯೋಗಬಲದಿಂದ ನೋಡಲಾಗಿ ಒಂದು ಗಂಡು ಒಂದು ಹೆಣ್ಣು ಇದ್ದವಂತೆ, ಕೆಲಕಾಲಾನಂತರ ಹಾಗಿಯೇ ಆಯಿತಂತೆ!

ಅದೇ ಥರ ಯಾರೊ ಇಬ್ಬರು ಯುವತಿಯರು ತಾವು ಬಯಸಿದವರನ್ನು ಮದುವೆ ಆಗುವೆವೋ ಇಲ್ಲವೋ ಎಂದು ಕೇಳಿದರಂತೆ. ನಿಮಗೆ ಆ ಯೋಗ ಇಲ್ಲವೆಂದು ಹೇಳಿದರಂತೆ ಅಂದಂತೆ ಆ ಯುವತಿಯರು ಮೈಸುಟ್ಟು ಕೊಂಡು ಸತ್ತು ಹೋದರಂತೆ. ಆಮೇಲೆ ಎಷ್ಟೋದಿನಕ್ಕೆ ಯಾವುದೋ ಹಳ್ಳ ದಾಟಿ ಬರುತ್ತಿದ್ದಾಗ ಮಹಾರಾಜ್ ಅಂತ ಕೂಗಿದಂತೆ ಆಯಿತಂತೆ. ಯಾರು ಅಂತ ನೋಡಿದರೆ, ಆತ್ಮ ಹತ್ಯೆ ಮಾಡಿಕೊಂಡಿದ್ದ ಒಬ್ಬ ಆ ಯುವತಿ ಬಂದಳಂತೆ. ನನಗೆ ಜನ್ಮ ಕೊಡಿ ಅಂತ ಕೇಳಿದಳಂತೆ. ಸುತ್ತ ಇದ್ದವರೆಲ್ಲ ನೀವು ಯಾರ ಜೊತೆಗೆ ಮಾತಾಡುತ್ತಿದ್ದೀರಿ ಅಂತ ಗಾಬರಿ ಆಗಿದ್ದರಂತೆ, ಆಗ ಜಗದ್ಗುರುಗಳು ನಿನಗೆ ಜನ್ಮ ಇಲ್ಲ ಅಂದರಂತೆ, ಕೊನೆಗೆ ಆ ಯುವತಿಯ ಪ್ರೇತಾತ್ಮ ಬಹಳ ಗಂಟು ಬಿದ್ದಮೇಲೆ ಇವರು 'ಆಗಲಿ' ಅಂದರಂತೆ, ಆದರಂತೆ ಮಠಕ್ಕೆ ಬರಲಾಗಿ ಅಲ್ಲೊಬ್ಬರು ಮಕ್ಕಳುಬೇಕು ಅಂತ ಬಂದಿದ್ದರಂತೆ, ಅವರಿಗೆ 'ನಿಮಗೆ ಹೆಣ್ಣುಮಗು ಕೊಟ್ಟಿದ್ದೇನೆ' ಎಂದು ಹರಸಿದರಂತೆ, ಅದರ ಪ್ರಕಾರ ಹೆಣ್ಣು ಹುಟ್ಟಿದಾಗ ಸ್ವತಃ ತಾವೋ ಹೋಗಿ ನಾಗಿನಿ ಅಂತ ಹೆಸರಿಟ್ಟು ಬಂದರಂತೆ.

ಜನ್ಮ ಪುನರ್‌ಜನ್ಮದ ಸುದ್ದಿಗಳು ಹೇಳುವುದಕ್ಕೆ ಹೇಗೋ ಕೇಳುವುದಕ್ಕೂ ಬಹು ಸ್ವಾರಸ್ಯಕರ ಸಂಗತಿಗಳು, ಯಾವುದೋ ಊರು ಎಲ್ಲಿಯದೋ ಹೆಸರು, ಎಂಥದೋ ಸಮಾಚಾರ. ಇವನ್ನು ತಪಾಸಣೆ ಮಾಡುವ ಗೋಜಿಗೆ ಯಾರು ಹೋಗುತ್ತಾರೆ ? ಪ್ರಚಾರಕ್ಕೆ ಇದರಂಥ ಸ್ವಾರಸ್ಯಕರಸಾಧನ ಇನ್ನೊಂದಿಲ್ಲ.

ಆದರೆ ಈಗ ಜನಜೀವನಕ್ಕೆ ಹಿಂದಿನ, ಮುಂದಿನ ಜನ್ಮದ ಯಾವ ವೃತ್ತಾಂತವೂ ಬೇಕಿಲ್ಲ. ಸಧ್ಯದ ಜೀವನ ವೃತ್ತಾಂತವೇ ಅವರಿಗೆ ಹಾಸಿಕೊಳ್ಳುವಷ್ಟಿದ್ದಾಗ ಅದೆಲ್ಲ ಇಲ್ಲದ ಸುದ್ದಿ ಯಾಕೆ ? ಒಂಗೆ ಜಗದ್ಗುರುಗಳ ಸಂದರ್ಶನ ದಾರಿ ತಪ್ಪುತ್ತಿದ್ದಾಗ ವಾಪಾಸು ತರಲು ಪ್ರಯತ್ನಿಸಿದೆ, ಆದರೆ ಸುಲಭದಲ್ಲಿ ಹಿಂತಿರುಗುವವರಲ್ಲ ಅವರು ! ಆಡಿದ್ದೇ ಆಡಿಕೊಂಡು ಎಲ್ಲೆಲ್ಲೋ ಹೋಗಿಬಿಟ್ಟರು, ತಮ್ಮ ಮಾತೇ ತಮಗೆ ! ತಮ್ಮ ಸ್ಮರಣಶಕ್ತಿ ಅಗಾಧವಾಗಿದೆ. ಎಂದು ಹೇಳಿಕೊಂಡದ್ದೇ ಹೇಳಿಕೊಂಡದ್ದು!!

ಕೇದಾರ ಪೀಠದ ಜಗದ್ಗುರುಗಳಾದ ಅವರು ಸಹಜವಾಗಿಯೇ ಭಾರತದ ತುಂಬೆಲ್ಲ ಸಂಚರಿಸಿರುತ್ತಾರೆ. ಕೊನೆಯಪಕ್ಷ ಅಲ್ಲಲ್ಲಿಯ ವೀರಶೈವ ಜನಾಂಗದ ಸ್ಥಿತಿಗತಿಗಳ ಬಗ್ಗೆ ತಿಳಿದಿರುತ್ತಾರೆ. ಅದನ್ನಾದರೂ ಇವರಿಂದ ತಿಳಿದುಕೊಳ್ಳೋಣ ಎಂದು ಕೇಳಿದರೆ ಅದಾವುದೂ ಅವರಿಗೆ ಸರಿಯಾಗಿ ನೆನಪಿಗೆ ಬರಲಿಲ್ಲ. ಅದೇಥರ ಅವರಿಗೆ ತಾವು ಬಾಲ್ಯದಲ್ಲಿ ಓದಿದ ಊರಿನ ಹೆಸರೂ ನೆನಪಾಗಲಿಲ್ಲ. ತ್ರಿಕಾಲಜ್ಞಾನಿಗಳೂ, ಜನ್ಮ ಪುನರ್‌ಜನ್ಮ ಬಲ್ಲವರೂ ಎನ್ನಲಾಗುವ ಇವರಿಗೆ ಒಂದು ಚಿಕ್ಕ ಊರಿನ ಅಥವಾ ಒಂದು ಚಿಕ್ಕ ಘಟನೆಯ ನೆನಪು ಬರಬಾರದೇನು ?

ಹೋಗಲಿ, ಅಂತ ವಿಷಯ ಬದಲಾಯಿಸಿ ಕೇಳಿದೆ.

"ಜಗದ್ಗುರು ಅನ್ನುವುದು ಯಾವಾಗ ನಿಂದ ಬಂತು ?"

"ಯುಗ ಯುಗಾಂತರದಿಂದ ! ಧರ್ಮಕ್ಕೆ ಯಾವಾಗ ಗ್ಲಾನಿ ಬರುತ್ತದೋ" ಎನ್ನುತ್ತ ಒಂದು ಸಂಸ್ಕೃತ ಶ್ಲೋಕವೊಂದನ್ನು ಹೇಳಿ, ಅದರ ಅರ್ಥ ಅಪಾರ್ಥಗಳನ್ನೆಲ್ಲ ಸುತ್ತು ಬಳಸಿ, ಎತ್ತೆತ್ತಲೋ ಹೋಗಿಬಿಟ್ಟರು. ಮತ್ತೆ ಅವರನ್ನು ಮೂಲ ವಿಷಯಕ್ಕೆ ತರುವುದೇ ತುಂಬ ಕಷ್ಟವಾಯಿತು, ಭಾರಿ ಉದ್ದುದ್ದನೆಯ ಮಾತು ಅನ್ನುವುದಕ್ಕಿಂತ ಅವರದೇ ಪರಿಭಾಷೆಯಲ್ಲಿ ಹೇಳುವುದಾದರೆ ಅಪ್ಪಣೆ ಕೊಡಿಸಿದರು. ನಾನು ಅವನ್ನು ನಡುವೆಯೇ ಕತ್ತರಿಸಿ ಮುಖ್ಯ ವಿಷಯದತ್ತ ತರಲು ಹೆಣಗಾಡುತ್ತಿದ್ದೆ ಕೊನೆಗೂ ಕೇಳಿದೆ,

"ಧರ್ಮಕ್ಕೆ ಗ್ಲಾನಿ ಬರುತ್ತಿದ್ದರೆ ಅದು ಧರ್ಮ ಹೇಗಾದೀತು ? ಈಗ ಸೂರ್ಯ ಇದ್ದಾನೆ, ಅವನ ಬೆಳಕಿಗೆ ಏನಾದರೂ ಆತಂಕ ಬರುತ್ತದೆಯೇ ? ಧರ್ಮ ಯಾವಾಗಲೂ ಸೂರ್ಯನ ಹಾಗ ಬೆಳಗುತ್ತಿರೋವಂಥದು ! ಅಲ್ಲವೆ ?"

ಎಂದು ನಾನು ತುಸು ಲಂಬಿಸಿಯೇ ಪ್ರಶ್ನೆ ಹಾಕಿದೆ, ಏಕೆಂದರೆ ಅವರಿಗೆ ಕೇಳುವ ಪ್ರಶ್ನೆಗಳು ಚಿಕ್ಕವಾಗಿದ್ದರೆ, ಅಥವಾ ವಿವರಣೆ ಇಲ್ಲದಿದ್ದರೆ ಅವರ ತಲೆಗೇ ಹೋಗುತ್ತಿರಲಿಲ್ಲ, ಎಂಬುದು ನನಗೆ ಆಗಲೇ ಕಂಡುಬಂದಿತ್ತು. ಅದಕ್ಕಾಗಿ ಸುಮ್ಮನೆ ಸೂರ್ಯನ ಉದಾಹರಣೆ ಕೊಟ್ಟಿದ್ದೆ. ಅವರಿಗೆ ಅಷ್ಟೇ ಸಾಕಾಯಿತು.

"ಹ್ಲೊ... ಸೂರ್ಯನಿಗೂ ಗ್ರಹಣ ಹಿಡಿಯುವುದಿಲ್ಲವೆ? ರಾಹುಕೇತು ಅಡ್ಡ ಬರುವುದಿಲ್ಲವೆ ?" ಎಂದುಬಿಟ್ಟರು

ಆಗ ನನಗೆ ಸೂರ್ಯಗ್ರಹಣವೆಂದರೆ ಅದೊಂದು ನೆರಳು ಬೆಳಕಿನ ವೈಜ್ಞಾನಿಕ ಕ್ರಿಯೆ ಎಂದು ಹೇಳಿಕೊಡುವುದಕ್ಕೇ ಸಾಕುಬೇಕಾಯಿತು. ಕೊನೆಗೆ "ಸೂರ್ಯ ಗ್ರಹಣ ತನಗೆ ತಾನೆ ಬಿಟ್ಟುಹೋಗುತ್ತದೆ. ಅದನ್ನು ಬಿಡಿಸೋದಕ್ಕೆ ಯಾರೂ ಅವತಾರ ಎತ್ತುವುದಿಲ್ಲ. ಆದ್ದರಿಂದ ನೀವು ಹೇಳುವಂತೆ ಧರ್ಮಕ್ಕೆ ಬರುವ ಗ್ಲಾನಿಗೂ ಈ ಗ್ರಹಣಕ್ಕೂ ಯಾವ ಸಂಬಂಧವಿಲ್ಲ..." ಎಂದು ವಿವರಿಸಿದೆ. ಅದು ಅವರಿಗೆ ಬೇಕಿರಲಿಲ್ಲ. ಆಮೇಲೆ

"ಹೋಗಲಿಬಿಡಿ. ನಿಮ್ಮನ್ನು ಜಗದ್ಗುರು ಮಾಡಿದವರು ಯಾರು ? ಮತ್ತು ಯಾವಾಗ ಆದಿರಿ...?" ಎಂದು ಕೇಳಿದೆ.

"ನಮ್ಮನ್ನು ಯಾರಾದರೂ ಮಾಡುತ್ತಾರೆಯೆ ? ನಾವೇ ಆದಿವಿ! ನಾವು ಐದಾರು ವರ್ಷದವರು ಇದ್ದಾಗಲೇ ತಂದೆತಾಯಿ, ಮನೆ ಮಾರು ಬಿಟ್ಟು ಕೇದಾರ ಕೇದಾರ ಅಂತ ಹೊಂಟೆವಿ..."

"ಕೇದಾರ ಕೇದಾರ ಅಂತ ನೀವು ಒಮ್ಮಿಗೆ ಹೆಂಗೆ ಹೋದಿರಿ ? ನಿಮಗೆ ಆ ಹೆಸರು ಹೇಗೆ ಗೊತ್ತಾಯ್ತು ? ಹಾಗೆ ಹೊಂಟಾಗ ನಿಮಗ ಯಾರೂ ಅಡ್ಡ ಬರಲಿಲ್ಲವೆ? ನಿಮ್ಮ ತಂದೆ ತಾಯಿ ಸುಮ್ಮನಿದ್ದರೆ?..."

"ನಾವು ಹೋಗಿಬಿಟ್ವಿ ರೈಲ್‌ಗಾಡ್ಯಾಗ ಮಾರ್ವಾಡಿಯೋರು ಜತೆ ಆದ್ರು. ಅವರಿಗೆ ನಮ್ಮ ಮಾತು ತಿಳೀತಿರಲಿಲ್ಲ. ನಾವು ಕೇದಾರ ಅಂತ ಅಷ್ಟೇ ಹೇಳುತ್ತಿದ್ವಿ. ಅವರು ನಾವೂ ಆ ಕಡೀಗೇ ಹೊಂಟೀವಿ. ಅಂದ್ರು, ಆದರೆ ದಿಲ್ಲೀಗಿ ಹೋಗಿ ಇಳಿದ ಮ್ಯಾಲೆ ಅವರು

ಮ್ಮ ಸಂಗಾತ ಕರಕೊಂಡು ಹೋಗ್ಬೇಕಂತ ಹಾಡಿದ್ರು ನಾವು ಅಲ್ಲೇ ಇದ್ದ ಮಿಲ್ಟ್ರಿಯವ ಗೆ ಕರೆದು ಹೇಳಿದ್ವಿ. ಅವರು ಬಿಡಿಸಿದ್ರು. ಲ್ಲಿಂದ ಮತ್ತೆ ಕೇದಾರಕ್ಕ ಹೋಗೋರ ಜೊತೆಗೆ ಗಾಡಿಗಿ ಕುಂತು ಹೋದ್ವಿ...

ಅವರ ಈ ಮಾತುಗಳಲ್ಲಿರುವ ಸುಳ್ಳು ಳೆಷ್ಟು? ಖರೆಮಾತುಗಳೆಷ್ಟು ? ಎಂಬುದನ್ನು ವರಿಸುವ ಅಗತ್ಯವಿಲ್ಲ. ಓದುಗರು ತಾವೇ ಮನಿಸಬಹುದು. ಆಗ ನನಗೆ ಇನ್ನಷ್ಟು ಜಾರು ಬಂತು. ಕೇಳುತ್ತ ಹೋದರೆ ಇವರು ೕಗೆಯೇ ಏನಾದರೊಂದು ಹೇಳುತ್ತಲೇ ಹೋಗುತ್ತಾರೆನ್ನಿಸಿತು. ಮತ್ತೆ ವಿಷಯ ಬದ ಲಾಯಿಸಿದೆ.

"ವೀರಶೈವ ಧರ್ಮದ ಇವತ್ತಿನ ಅವಸ್ಥೆ ಗ್ಗೆ ನಿಮಗೆ ಏನೆನ್ನಿಸುತ್ತದೆ ?" ಸ್ವಲ್ಪ ಹೊತ್ತು ವರಿಗೆ ಈ ಸರಳ ಪ್ರಶ್ನೆ ಕೂಡ ಅರ್ಥವಾಗ ಲ್ಲ. ವಿವರಿಸಬೇಕಾಯಿತು:

"ಏನು ಮಾಡೋದು ? ಇದು ಹಿಂಗೇ ಡೆಯೋದೆ ! ಜಗತ್ತ ಸುಧಾರಿಸ್ತೀನಿ ಅಂತ ಾದ ಬಸವಣ್ಣನ ಗತಿ ಏನಾಯ್ತು ? ಹಂಗೆ ಗ್ತಾದ ಅದು ತಾನು ಆಗೋ ಹೊತ್ತಿಗಿ ನೇ ಆಗ್ತಾದ..."

"ಧರ್ಮದ ಪ್ರಮುಖ ಸ್ಥಾನದಾಗಿರೋ ಮ್ಮಂಥವರು ಹೀಗೆ ಅಂದ್ರೆ ಹೇಗೆ? ಅದನ್ನ ಡಿಸೋದು ನಿಮ್ಮ ಜವಾಬ್ದಾರಿ ಲ್ಲೇನು ?"

"ಯಾರು ಜವಾಬ್ದಾರಿ ? ಈಗ ಾರಾತ್ಮ ತು ಯಾರ್ ಕೇಳ್ತಾರ! ಇದು ಪ್ರಜಾ ರಾಜ್ಯ. ಇದು ಇರೋವರೆಗೂ ಹಿಂಗೇ ನಡಿ ಯೋದೆ ! ಇದು ಹೋಗಿ ಹುಕುಂಶಾಹಿ ಬರ ಬೇಕು. ಅವಾಗ ತಾನೇ ಸುಧಾರಸ್ತಾದ..."

"ಹಂಗಾದ್ರ ನೀವು ಪ್ರಜಾಪ್ರಭುತ್ವ ಬರೋಬರಿ ಅಲ್ಲ ಅಂತ ಹೇಳ್ತೀರಿ. ಮತ್ತೆ ರಾಜ ಮಹಾರಾಜರ ಕಾಲಾನೆ ಛಲೋ ಅಂತ ನಿಮ್ಮ ಅಂಬೋಣವೇನು?"

"ಅವಾಗೇ ಜನ ಹೇಳಿಧಾಂಗ ಕೇಳ್ತಾರು!"

"ರಾಜ ಮಹಾರಾಜರಂತೂ ಈಗ ಬರಂ ಗಿಲ್ಲ, ಬಂದ್ರೆ ಕಮುನಿಷ್ಟ್ ಸರಕಾರ ಬರಬೇಕುಒಂದು ವೇಳೆ ಇನ್‌ಮ್ಯಾಲೆ ಆ "ಕಮ್ಯುನಿಷ್ಟ್ ಸರಕಾರ ಬಂದ್ರೆ ನಿಮ್ಮ ಜಗದ್ಗುರು ಪೀಠ, ಧರ್ಮದೇವರು ಯಾವುದೂ ಇರಂಗಿಲ್ಲ. ಆಗ ಹೆಂಗ್ ಮಾಡ್ತೀರಿ ?"

"ಯಾರ್ ಹೇಳ್ತಾರು? ಕಮ್ಯುನಿಷ್ಟ್ ದೇಶದಾಗೆಲ್ಲ ದೇವರು, ಧರ್ಮ ಅದಾವು!" ಎಂದಾಗ ನನಗೆ ಅವರೊಂದಿಗೆ ಮಾತಾಡುವ ಇಚ್ಛೆಯೇ ಹೋಯಿತು. ಆದರೂ ಕೊನೆ ಗೊಂದು ಪ್ರಶ್ನೆ ಕೇಳಿದೆ.

"ಲಿಂಗಾಯತರಾಗೇ ನಾನಾ ಜಾತಿ ಅದಾವು ಬಣಜಿಗೆ - ರೆಡ್ಡಿ – ಪಂಚಮಸಾಲಿ ಇವನ್ನು ತೆಗೆದು ಹಾಕುವುದಕ್ಕಾದರೂ ನೀವು ಪ್ರಯತ್ನಿಸಬಹುದಲ್ಲ!"

"ಆಗ್ಲೇ ಹೇಳಿದೆವಲ್ಲ! ಅವೆಲ್ಲ ಆಗೋ ಕಾಲ ಬಂದಾಗ ಆಗ್ತಾವ"

ಎನ್ನುತ್ತಿದ್ದಾಗ ಮತ್ತೆ ಒಬ್ಬಿಬ್ಬರು ಜಗದ್ಗುರುಗಳ ದರ್ಶನಕ್ಕೆಂದು ಬಂದು ನಮ್ಮ ಮಾತು ಕೇಳುತ್ತ ಕುಳಿತರು. ಅಷ್ಟು ಹೊತ್ತಿಗೆ

ಜಗದ್ಗುರುಗಳಿಗೆ ನಮ್ಮ ಪ್ರಶ್ನೆಗಳಿಂದ ಒಂದಷ್ಟು ಸಿಟ್ಟು ಬಂದಂತೆ ಆಗುತ್ತಿದ್ದರೂ ಏನೋ ಬಾಯಿಗೆ ಬಂದಾಗೆ ಹೇಳುತ್ತಿದ್ದರು. ಬೇರೆ ಜನ ಬಂದಾಗ ನಾವು ಕೇಳುವುದು ಅವರು ಹೇಳುವುದು. ಆಗ ನಾವು ಅದಕ್ಕೆ ಪ್ರತಿ ಆಡೋದು, ಅಷ್ಟೊಂದು ಸಮಂಜಸವೆಂದು ಅವರಿಗೆ ತೋರಲಿಲ್ಲ. ಕಾರಣ ಒಳಗೊಳಗೇ ಹೊಗೇನಾಡುತ್ತಿದ್ದ ಸಿಟ್ಟು ನಡು ನಡುವೆ "'ಸುಮ್ನೇ ಕೇಳ್ರಲ್ಲಿ!" ಎಂಬ ಗಡಸುತನದ ಧ್ವನಿಯಲ್ಲಿ ಬರತೊಡಗಿತು. ಅವರ ಈ ಥರದ ಎಚ್ಚರಿಕತನದದಿಂದ ನನಗೂ ಒಂದಷ್ಟು ರೇಗಿತು.

"ಹ್ಞೂಂ...ಹೇಳ್ರಿ ಯಾರ್ಬೇಡಂತಾರೆ!"

ನಾನೂ ಆದೇ ಧ್ವನಿಯಲ್ಲೇ ಪ್ರತಿಕ್ರಿಯಿಸಿದೆ. ಜಗದ್ಗುರು ಗಮನಿಸಿ, ತುಸು ನಕ್ಕಂತೆ ಮಾಡಿ ಮುಂದುರಿದರು. ಆಮೇಲೆ ಮಾತು, ಬಸವಣ್ಣನವರ ಬಗ್ಗೆ. ಗುರು ವಿರಕ್ತರ ಬಗ್ಗೆ ತಿರುಗಿದವು. ಗುರುವಿರಕ್ತರಲ್ಲಿ ಭೇದವೇ ಇಲ್ಲವೆಂದೂ ಇದನ್ನು ಬೇರೆಯುವರೇ ಹುಟ್ಟು ಹಾಕುತ್ತಿದ್ದಾರೆಂದೂ ಜಗದ್ಗುರುಗಳು ಹೇಳಿದರು. ಕರ್ನಾಟಕದಲ್ಲಿರುವ ಎಲ್ಲ ವಿರಕ್ತ ಜಗದ್ಗುರು ಪೀಠಗಳೆಲ್ಲವೂ ಕೇದಾರ ಜಗದ್ಗುರು ಪೀಠದ ಶಿಷ್ಯ ಪರಂಪರೆಗೆ ಸೇರಿದವುಗಳೇ ಆಗಿವೆಯೆಂದು ತಿಳಿಸಿದರು. ಮುರುಗೋಡದ ಶತಾಯುಷಿ ಅಜ್ಜನವರ ಒಂದು ಪ್ರಸಂಗವನ್ನು ಎತ್ತಿ ಹೇಳಿ ತಾವು ಹೇಗೆ ಕರ್ನಾಟಕದ ವಿರಕ್ತ ಪರಂಪರೆಗೆ ಮುಖ್ಯಸ್ಥರು ಎಂಬುದನ್ನು ಒತ್ತಿ ಹೇಳಿದರು.

ಆಗಲೆ ಐದುವರೆಯಾಗಿದ್ದರಿಂದ ಮೆರವಣಿಗೆಗೆ ಹೊತ್ತಾಗಿದೆಯೆಂದು ಗಡಬಡಿಸುವ ಭಕ್ತಾದಿಗಳ ಗುಂಪೊಂದು ಬಂತು. ಅ[illegible] ಪಲ್ಲಕ್ಕಿ ಇಲ್ಲದೆ, ಬರೀ ಜೀಪಿನಲ್ಲೇ ಮೆರವಣ[illegible] ಇರುವ ಬಗ್ಗೆ ತಿಳಿಸಿದಾಗ ಜಗದ್ಗುರು ಕೊ[illegible] ಕುಗ್ಗಿದಂತೆ ಕಂಡರು. 'ಹಾಗಾದರೆ ನಾವು ಜೀ[illegible]ನಲ್ಲಿ ಕಿರೀಟ ಇಟ್ಟುಕೊಳ್ಳಬಹುದೆ'? ಎಂ[illegible] ಜಿಜ್ಞಾಸೆ ಶುರುವಾಯಿತು. ತಾಂಡೂರಿನಲ್ಲಿ[illegible] ಒಮ್ಮೆ ಹೀಗಾಗಿದ್ದ ಬಗ್ಗೆ ಮಾತು ಬಂತ[illegible] ಆದರೆ ಈಗ ಏನು ಮಾಡುವುದು ?

ಇಡೀ ಜಗತ್ತಿಗೇ ವಿಶ್ವಮಾನವ ತ[illegible]ಗಳನ್ನು ಹೇಳಿಕೊಟ್ಟದ್ದೆಂದು ಕರೆಯಲಾಗು[illegible] ವೀರಶೈವ ಧರ್ಮದ ಬಹುಮುಖ್ಯ ಗುರುಗಳ[illegible] ಹೀಗಿರುವಾಗ ಆ ಸಮಾಜದ ಗತಿ ಹೇಗಿ[illegible] ಬಹುದು ? ಕೊನೆಗೆ ವ್ಯರ್ಥ ಕಾಲಹರ[illegible]ವಾದ ಬೇಸರದಿಂದ ನಾವು ಅಲ್ಲಿಂದ ಎದ್ದು ಬರುತ್ತಿದ್ದಾಗ ಅಷ್ಟೊತ್ತು ಸುಮ್ಮನೆ ಮೂ[illegible]ಯಲ್ಲಿ ಕುಳಿತಿದ್ದ ಬೆಕ್ಕೊಂದು ಆಕಳಿಸಿರೋದ[illegible] ಕಾಣಿಸಿತು !

[ಮುಂದಿನ ತಿಂಗಳು ಉಜ್ಜಯನಿ ಜಗದ್ಗುರುಗ[illegible] ಸಂದರ್ಶನ]

---

## ನಗು ಹ್ಯಾಂಗ ಬಂದೀತು ?

ಹೊಟ್ಟೆಗೆ ಹಿಟ್ಟಿಲ್ಲ
ಮೈಗೆ ಹಿಂಜಿದರಳೆಯ
ಗಟ್ಟಿ ಬಟ್ಟೆಗಳಿಲ್ಲ
ಇರಲು ನೆತ್ತಿಯ ಮೇಲೊಂದು
ಸೂರಿಲ್ಲ.
ನಗು ಅಂದ್ರ ನನ್ನವರಿಗೆ
ನಗು ಹ್ಯಾಂಗ ಬಂದಿತು ?

○ ಶ್ರೀಶೈಲ ಕಾಂಬಳೆ

## ಕವಡು ಕಂಟುಕ ಲೆಕ್ಕಗಳು

# ಸುಳ್ಳು ನಾವು ಆಡುವವರಲ್ಲ ಸುಳ್ಳು ನಮ್ಮಮನೆ ದೇವರು !

ಒಂದೂರಲ್ಲಿ ಗಾಣಿಗ ಬಣಜಿಗ ಮತ್ತು ಒಕ್ಕಲಿಗರೆಂಬ ಮೂರು ಜನ ಗೆಳೆಯರಿದ್ದರು. ಈ ಮೂರು ಜನ ಸಾಯಂಕಾಲದ ಹೊತ್ತು ಊರ ಹೊರಗಿನ ಹನಮಂತ ದೇವರಗುಡಿ ಕಟ್ಟೆಯ ಮೇಲೆ ಕುಳಿತು ಹರಟೆ ಹೊಡೆಯುತ್ತಿದ್ದರು.

ಹೀಗೆಯೇ ಕಾಲ ಕಳೆಯುತ್ತಿರಲಾಗಿ ಗಾಣಿಗ ಮತ್ತು ಬಣಜಿಗರಲ್ಲಿ ತಮ್ಮ ಇನ್ನೊಬ್ಬ ಮಿತ್ರ ಒಕ್ಕಲಿಗನ ಬಗ್ಗೆ ಹೊಟ್ಟೆಕಿಚ್ಚು ಉಂಟಾಯಿತು. ಏಕೆಂದರೆ ಒಂದೇ ಹಾಸಿಗೆಯಂತೆ ಇದ್ದ ಅವನ ಎಂಟು ಕೂರಿಗೆ ಹೊಲದಲ್ಲಿ ಅವನು ಬೇಕಾದ್ದು ಬೆಳೆದುಕೊಳ್ಳುತ್ತಿದ್ದನು.ಏನಾದರೂಮಾಡಿ ಅವನ ಆ ಎಂಟು ಕೂರಿಗೆ ಹೊಲವನ್ನು ಲಪಟಾಯಿಸಬೇಕೆಂಬ ದುರ್ನಿಯತ್ತು ಹುಟ್ಟಿಕೊಂಡಿತು. ಆದರೆ ಹೇಗೆ ? ತುಂಬಾ ತಲೆ ಕೆಡಿಸಿಕೊಂಡರು. ಕೊನೆಗೊಂದು ಉಪಾಯ ಹೊಳೆಯಿತು.

ನಾವು ಮೂವರಲ್ಲಿ ಯಾರಾದರೂ ಮಾತಾಡಿದಾಗ ಯಾರು ಅದನ್ನು ಸುಳ್ಳು ಅಂತ ಹೇಳುತ್ತಾರೋ ಅವರು ಉಳಿದಿಬ್ಬರು ಬೇಡಿದ್ದನ್ನು ಕೊಡಬೇಕು ಎಂದು ಮಾತಾಡಿಕೊಂಡರು. ಇದು ಒಕ್ಕಲಿಗನಿಗೆ ಗೊತ್ತಾಗಲಿಲ್ಲ. ಎಂದಿನಂತೆ ಗುಡಿಯ ಕಟ್ಟೆಯ ಮೇಲೆ ಕುಳಿತು ಮಾತಾಡುತ್ತಿದ್ದಾಗ ಇವರು ಆ ವಿಷಯವನ್ನು ಅವನಿಗೆ ತಿಳಿಸಿ. ಸುಳ್ಳು ಅಂತ ಹೇಳಿದವರು ಶರ್ತನ್ನು ಉಲ್ಲಂಘಿಸಿದಂತೆ ಆಗುತ್ತದೆಂದೂ ಆದ್ದರಿಂದ, ಹಾಗೆ ಹೇಳಿದವರು ಉಳಿದವರಿಗೆ ಅವರು ಬೇಡಿದಷ್ಟು ಕೊಡಬೇಕೆಂದೂ ಹೇಳಿದರು. ಸರಿ! ಅಂತ ಒಕ್ಕಲಿಗನೂ ಒಪ್ಪಿಕೊಂಡನು ಮಾತು ಶುರು ಆದವು. ಮೊದಲು ಬಣಜಿಗ ಹೇಳಿದನು.

ಮೊದಲಿನ ಕಾಲದಲ್ಲಿ ನಾವು ದೊಡ್ಡ ಶ್ರೀಮಂತ ವ್ಯಾಪಾರಿಗಳಾಗಿದ್ದೆವು. ಈಗಿನಂತೆ ಆಗ ಯಾವುದೇ ವಾಹನ ಸೌಕರ್ಯ ಇದ್ದಿರಲಿಲ್ಲ. ಹೇರಿಕೆ ಎತ್ತಿನ ಮೇಲೆಯೇ ನಮ್ಮ ವ್ಯವಹಾರ ನಡೆಯುತ್ತಿತ್ತು. ಆದರೆ ಒಮ್ಮೆ ನಮ್ಮ ಆ ಹೇರಿಕೆ ಎತ್ತಿನ ಡುಬ್ಬದ ಮೇಲೆ ಒಂದು ಲಾಳಿ ಬಿತ್ತು. ಆದ್ದರಿಂದ ಅದನ್ನು ಮನೆಯಲ್ಲೇ ಬಿಟ್ಟು ಬಿಟ್ಟೆವು. ಎತ್ತಿನ ಡುಬ್ಬದ ಲಾಳಿ ಕಂಡ ಕಾಗೆಗಳು ಕಾಕಾ ಅಂತ ಕೂಗಿಕೊಂಡು ಬರುತ್ತಿದ್ದವು. ನಾವು ಆದಷ್ಟು ಅವನ್ನು ಓಡಿಸುತ್ತಿದ್ದೆವು. ಆದರೂ ಯಾವಾಗಲೋ ನಮ್ಮ ಕಣ್ಣು ತಪ್ಪಿಸಿ ಬಂದ ಕಾಗೆಯೊಂದು ಆ ಲಾಳಿಯನ್ನು ಕುಕ್ಕಿ ತಿಂದದ್ದಲ್ಲದೆ ಅದರಲ್ಲಿ ಹೇತು ಹೋಗಿತ್ತು. ಅದು ಹೇತು ಹೋಗಿದ್ದರಿಂದ ಬೆಳಗಾಗೆದ್ದು ನಾವು ನೋಡುವುದರೊಳಗೆ ಬೇವಿನ ಮರವೊಂದು ಹುಟ್ಟಿಕೊಂಡಿತ್ತು. ಅದರ ಟೊಂಗೆ ಟಿಸಿಲುಗಳು ಬಹುದೂರ ದೂರದವರೆಗೆ ಹಬ್ಬಿಕೊಂಡಿದ್ದವು. ಒಂದು ಟೊಂಗೆ ಬೊಂಬಾಯಿಯವರೆಗೆ ಹೋಗಿತ್ತು. ಇನ್ನೊಂದು ಮದ್ರಾಸಿಗೆ ಮತ್ತೊಂದು ಹೈದ್ರಾ

ಬಾದಿಗೆ, ಹಾಗೂ ಮಗದೊಂದು ಬೆಂಗಳೂರಿಗೆ ಹೀಗೆ ನಾಲ್ಕು ಟೊಂಗೆಗಳು ನಾಲ್ಕು ದೊಡ್ಡ ಶಹರಗಳಿಗೆ ಚಾಚಿದ್ದವು. ಇವರಿಂದ ನಮಗೆ ಮತ್ತಷ್ಟು ಅನುಕೂಲವಾಯಿತು.

ನಾವು ಬೊಂಬಾಯಿಯಲ್ಲಿ ಖರೀದಿ ಮಾಡುವುದಿದ್ದಾಗ, ಆ ಟೊಂಗೆ ಹತ್ತಿ ಹೋಗುತ್ತಿದ್ದೆವು. ಅಲ್ಲಿ ಖರೀದಿ ಮಾಡಿದ ಸಾಮಾನುಗಳನ್ನೆಲ್ಲ ಅದೇ ಟೊಂಗೆಗೇ ಒಂದು ಗಂಟು ಮಾಡಿ ಅಲ್ಲೇ ತೂಗು ಹಾಕಿ ಬರುತ್ತಿದ್ದೆವು. ಅದೇ ರೀತಿ ಮದ್ರಾಸಿಗೆ ಹೋಗಿ ಅಲ್ಲಿ ಖರೀದಿ ಮಾಡಿದ್ದನ್ನು ಅದೇ ಟೊಂಗೆಗೆ ಕಟ್ಟುತ್ತಿದ್ದೆವು. ಅಲ್ಲಿಂದ ಹೈದ್ರಾಬಾದಿಗೆ ಬೆಂಗಳೂರಿಗೆ ಹೋದಾಗಲೂ ಹಾಗೆಯೇ ಮಾಡಿ ಬಿಡುತ್ತಿದ್ದೆವು. ಮರಳಿ ಊರಿಗೆ ಬಂದು ಯಾವ ಮಾಲನ್ನು ಯಾವ ಶಹರಿಗೆ ಕಳಿಸಬೇಕಾಗಿರುತ್ತಿತ್ತೋ ಅಯಾ ಶಹರಿಗೆ ಕಳಿಸಲು, ಎತ್ತಿನಕೊಂಬು ಹಿಡಕೊಂಡು ಆ ಎತ್ತನ್ನು ಆಯಾ ದಿಕ್ಕಿಗೆ ತಿರುಗಿಸುತ್ತಿದ್ದೆವು. ಹಾಗೇ ತಿರುಗಿಸಿದಾಗೆಲ್ಲ ಅದರೊಂದಿಗೆ ಗಿಡವೂ ತಿರುಗಿ ಕೊಳ್ಳುತ್ತಿತ್ತು. ಅದೇ ರೀತಿ ಆ ಟೊಂಗೆಗಳೂ ತಿರುಗಿಕೊಳ್ಳುತ್ತಿದ್ದವು. ಬೊಂಬಾಯಿ ಟೊಂಗೆ, ಮದ್ರಾಸಿಗೆ ಬಂದಾಗ ಮದ್ರಾಸಿನವರು ನಾವು ಆ ಟೊಂಗೆ ಕಟ್ಟಿದ ಮಾಲನ್ನು ಬಿಚ್ಚಿ ಕೊಳ್ಳುತ್ತಿದ್ದರು. ಮದ್ರಾಸಿನ ಟೊಂಗೆ, ಬೆಂಗಳೂರಿಗೆ ಬಂದಾಗ ಬೆಂಗಳೂರಿನವರು, ಬೆಂಗಳೂರಿನ ಟೊಂಗೆ, ಹೈದ್ರಾಬಾದಿಗೆ ಬಂದಾಗ ಹೈದ್ರಾಬಾದಿನವರು ಹೀಗೆ ಆಯಾ ಶಹರುಗಳಿಗೆ ಮಾಲು ಸರಬರಾಜು ಮಾಡುತ್ತಿದ್ದೆವು. ಇದರಿಂದ ನಾವು ಭಾರೀ ಶ್ರೀಮಂತರಾಗಿದ್ದೆವು.

ಇದನ್ನು ಕೇಳಿದ ಗಾಣಿಗ ಮೊದಲೇ ಮಾತಾಡಿಕೊಂಡದ್ದರಿಂದ ಸುಮ್ಮನೇ ಕುಳಿತು ಕೇಳಿದನು. ಒಕ್ಕಲಿಗನಿಗೆ ಇದೆಲ್ಲ ಸುಳ್ಳು ಅಂತ ತಿಳಿದರೂ ಇದ್ದರೂ ಇರಬಹುದು ಅಂದನು. ಏಕೆಂದರೆ ಸುಳ್ಳು ಅಂತ ಹೇಳಿದರೆ ಶರ್ತು ಮೈಮೇಲೆ ಬರುತ್ತದೆ.

ತರುವಾಯ ಗಾಣಿಗನ ಪಾಳಿ ಬಂತು ಅವನು ತನ್ನ ಕತೆ ಹೇಳಿದನು.

ನಮ್ಮಪ್ಪ ನಮ್ಮವ್ವನ ಕಾಲದಲ್ಲಿ ನಾವೂ ಭಾರೀ ಶ್ರೀಮಂತರಾಗಿದ್ದೆವು. ನಮ್ಮ ಸುತ್ತ ಮುತ್ತಲ ಹಳ್ಳಿಗಳಾದ ದಿಗ್ಗಿ, ಸಾದ್ಯಾಪುರ, ಮದ್ರಿಕಿ ಮುಡಬೂಳ, ಶಿರವಾಳ, ಕನ್ಯೆಕೊಳ್ಳೂರು ಹತ್ತಿಗುಡೂರು, ಮಾರ್ಕಲ್‌ಕೊಳ್ಳೂರು. ಹೆಮನೂರು ಸತ್ಯಂಪೇಟೆ, ಶಾಪದಳ್ಳಿ ಸಗರ ಮುಂತಾದ ಗ್ರಾಮಗಳಲ್ಲಿ ನಮ್ಮಪ್ಪ ಕುಸುಬಿ ಸೇಂಗಾ ಖರೀದಿ ಮಾಡಿ ಆಯಾ ಊರುಗಳಲ್ಲೇ ಗಾಣ ಹಾಕಿ ಎಣ್ಣೆ ತಯ್ಯಾರು ಮಾಡುತ್ತಿದ್ದರು. ಹಾಗೂ ಆಯಾ ಊರಿನ ಎಣ್ಣೆಯನ್ನು ಅಲ್ಲಲ್ಲಿಯ ಹಳ್ಳಗಳಿಗೆ ಸುರುವಿ ಬಿಡುತ್ತಿದ್ದರು. ಆ ಎಣ್ಣೆಯಲ್ಲವೂ ಹೊಳೆಗೆ ಬರುತ್ತಿತ್ತು. ಆ ಹೊಳೆ ದಂಡಿ ವ್ಯಾಲ ಒಂದು ದೊಡ್ಡ ತಗ್ಗು ಹೊಡಿಸಿದ್ದರು. ಎಲ್ಲಾ ಎಣ್ಣೆ ಅದೇ ತಗ್ಗಿಗೆ ಬಂದು ಜಮಾ ಆಗುತ್ತಿತ್ತು. ಆಗ ಅದನ್ನೆಲ್ಲ ನಮ್ಮವ್ವ ಕುಂತು ಮಾರಾಟ ಮಾಡುತ್ತಿದ್ದಳು. ಇದರಿಂದಾಗಿ ನಾವೂ ಆ ಕಾಲದಲ್ಲಿ ದೊಡ್ಡ ಧನಿಕರಾಗಿದ್ದೆವು.

ಗಾಣಿಗನ ಈ ಕತೆ ಕೇಳಿದ ಬಣಜಿಗ ಹ್ಞೂಂ. ಅಂತ ತಲೆ ಹಾಕಿದನು. ಆದರೆ ಒಕ್ಕಲಿಗನಿಗೆ ಇದು ಅಪ್ಪಟ ಸುಳ್ಳು ಅಂತ ಗೊತ್ತಾಯಿತು ಹಾಗಂತ ಬಾಯಿಬಿಟ್ಟರೆ, ಅವರು ಬೇಡಿದ್ದು

ಕೊಡಬೇಕಾಗುತ್ತದೆ. ಏನು ಮಾಡುವುದು ? ಎಂದು ಕೇಳಿದ್ದಾಗ "ಈಗ ನಿನ್ನ ಸರತಿ, ಈಗ ನೀನು ಹೇಳು" ಎಂದರು. ಒಕ್ಕಲಿಗ ಸ್ವಲ್ಪ ಯೋಚಿಸಿ ಹೀಗೆ ಹೇಳಿದನು,

ನಾವು ನಮ್ಮ ಮನೆಯಲ್ಲಿ ನಾಲ್ಕು ಜನರಿದ್ದೆವು. ನಾನು, ನಮ್ಮಪ್ಪ, ನಮ್ಮವ್ವ ಹಾಗೂ ನನ್ನ ತಮ್ಮ. ಒಂದುವರ್ಷ ಏನೇನೂ ಮಳೆ ಆಗಲಿಲ್ಲ. ಆ ವರ್ಷ ನಾವು ನಾಲ್ಕುಮಂದಿ ಹೊಲದ ದಂಡಿಗೆ ತಲೆ ಮಾಡಿ ಮಲಗಿ ಇಡೀ ರಾತ್ರಿ ನಮ್ಮ ನಮ್ಮ ತಲೆಗಳನ್ನು ತೊಯಿಸಿಕೊಂಡು ಬಂದು, ನಮ್ಮ ಹೊಲದ ನಾಲ್ಕು ದಂಡಿಗಿ ತಲೆಇಟ್ಟು ಮಲಗುತ್ತಿದ್ದೆವು. ತಲೆ ತೊಯ್ದ ನೀರೆಲ್ಲ ಹೊಲ ಉಂಡು ತಣ್ಣಗೆ ಆಗುತ್ತಿತ್ತು. ಆ ವರ್ಷ ಎಳ್ಳು ಬಿತ್ತಿದ್ದೆವು. ಭಾರೀ ಬೆಳೆ ಬಂತು. ಆಗ ಧಾರಣಿ ಭಾಳ ಕಮ್ಮಿ ಇತ್ತು. ಅದಕ್ಕಂತ ನಾವು ಅವನ್ನ ಹಂಗೇ ಇಟ್ಟಿದ್ದಿವಿ. ಆಗ ನೀವಿಬ್ಬರು ಕೂಡಿಕೊಂಡು ಬಂದು "ಒಂದು ತಿಂಗಳ್ಕ ತಡಮಾಡಿ ರೂಪಾಯಿ ಇಸಗೊಳ್ಳುವುದಾದರೆ, ಚೀಲಕ್ಕೆ ಒಂದು ರೂಪಾಯಿ ಹೆಚ್ಚು ಕೊಡ್ತೀವಿ" ಅಂದ್ರಿ. ಅದಕ್ಕ ಒಪ್ಪಿಕೊಂಡ ನಾನು ನಿನಗೆ 1200-00 ರೂ. ಅವನಿಗೆ 1200-00 ರೂ. ಗಳ ಎಳ್ಳು ಕೊಟ್ಟಿದ್ದೆ, ಆದರೆ ಆಗ ಎಳ್ಳು ಒಯ್ದವರು ಮೊತ್ತಿಗೂ ಹಿಂತಿರುಗಿ ಒಂದು ರೂಪಾಯಿ ಕೊಟ್ಟಿಲ್ಲ. ಇವೊತ್ತು ಕೊಟ್ಟಾರು. ನಾಳೆ ಕೊಟ್ಟಾರು ಅಂತ ಸುಮ್ನೆ ಇದ್ದೀನಿ. ಇನ್ನೊಂದು ವಾರದೊಳಗ ಬಡ್ಡಿ ಸಹಿತ ತಂದು ಕೊಡಿರಿ".

ಬಣಜಿಗ-ಗಾಣಿಗ ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. "ನಾವೇ ಅವನಿಗೆ ಮೋಸ ಮಾಡಿ ಅವನ ಹೊಲ ನುಂಗಿ ನೀರು ಕುಡಿಯಬೇಕೆಂದರೆ ಈಗ ಅವನೇ ಪುನಃ ನಮ್ಮ ಕುಂಡಿ ಬುಡಕ್ಕ ನೀರು ಬಿಟ್ಟಿದ್ದಲ್ಲೋ" ಅಂತ ಪರಸ್ಪರ ಮನಸ್ಸಿನಲ್ಲೇ ಅಂದುಕೊಂಡರು. "ಇದು ಸುಳ್ಳು. ನಾವೇನೂ ಕೊಡಬೇಕಿಲ್ಲ ಅಂದ್ರೆ ಶರ್ತಿನ ಪ್ರಕಾರ ಅವನು ಬೇಡಿದ್ದನ್ನು ಕೊಡಬೇಕಾಗುತ್ತದೆ. ಇಲ್ಲವಾದರೆ ತಲಾ 1200-00 ರೂಪಾಯಿ ಹಾಗೂ ಬಡ್ಡಿಯನ್ನು ಒಪ್ಪಿಸಬೇಕಾಗುತ್ತದೆ. ಏನು ಮಾಡುವುದು ? ಬಣಜಿಗ ಗಾಣಿಗರಿಬ್ಬರು ಚಿಂತಾಕ್ರಾಂತ ರಾದರು. ಹೇಗೂ ಒಂದು ವಾರದ ಮುದ್ದತ್ತು ಇದ್ದುದರಿಂದ "ನೋಡೋಣ" ಎಂದು ಮುಖ ಜೋಲು ಹಾಕಿಕೊಂಡು ಎದ್ದು ಬಂದರು. ಆದರೆ ಚಿಂತೆ ಬಿಡಲಿಲ್ಲ. ಕಂಡಕಂಡವ ರನ್ನೆಲ್ಲ ಇದಕ್ಕೇನು ಮಾಡುವುದು? ಎಂದು ಕೇಳಿ ನೋಡಿದರು. ಎಲ್ಲ ವಕೀಲ ಶಾಣ್ಯಾ ರನ್ನೆಲ್ಲ ವಿಚಾರಿಸಿದರು. ಯಾರೂ ಸರಿಯಾದ ಉಪಾಯ ಹೇಳಲಿಲ್ಲ. ಇನ್ನೇನು ಮಾಡುವುದು? ವಾರ ಮುಗಿಯುತ್ತ ಬಂತು. ಒಕ್ಕಲಿಗ ಅವರನ್ನು ಕರೆಯ ಕಳಿಸಿದ ಸುಮ್ಮನೆ ತಲೆ ಬಗ್ಗಿಸಿಕೊಂಡು ಹೊರಟರು.

ಹಾದಿಯಲ್ಲಿ ದನಕಾಯುವ ಹುಡುಗರಿದ್ದು; ಅವರಲ್ಲಿ, ಗೌಡ ಕುಲ್ಕರ್ಣಿ, ತಳವಾರ, ಊರ ಜನ ಹೀಗೆಲ್ಲ ಆಗಿ ಯಾವುದರೋ ಆಟ ಆಡುತ್ತಿದ್ದರು. ಗೌಡನ ಪಾತ್ರ ವಹಿಸಿದ್ದ ಹುಡುಗ, ತನ್ನ ಹತ್ತಿರವಿದ್ದ ತಳವಾರನಿಗೆ, ತಲೆಬಗ್ಗಿಸಿಕೊಂಡು ಹೊರಟಿದ್ದ ಬಣಜಿಗ ಗಾಣಿ ಗರನ್ನು ಕರೆದುಕೊಂಡು ಬರುವಂತೆ ಆಜ್ಞಾಪಿಸಿದನು. ತಳವಾರ ಹೋಗಿ ಕರೆದರೆ ಅವರು




# ದೋರನಹಳ್ಳಿಯ ಪ್ರಧಾನ ಜೋಳದ ಗಣಪತಿಯ ಗೋಣಗಾಟ

ಈಗಿರುವ ಜಿಲ್ಲಾ ಪರಿಷತ್ತು ಹಾಗೂ ಮಂಡಲ ಪಂಚಾಯತಿಗಳನ್ನು ಹೊಗಳುವವರೂ ಇರುವಂತೆ ತೆಗಳುವವರೂ ಇದ್ದಾರೆ. ಈ ಬಗ್ಗೆ ಅವರಿವರನ್ನು ಕಾಣುವುದಕ್ಕಿಂತ ಯಾರಾದರೂ ಜಿ. ಪ. ಸದಸ್ಯನನ್ನೋ ಅಥವಾ ಮಂಡಲ ಪ್ರಧಾನರನ್ನೋ ಕಂಡು ಮಾತಾಡೋಣ ಎಂದು ಯೋಚಿಸುತ್ತಿದ್ದಾಗ ಶಹಾಪುರ ತಾಲೂಕಿನ ದೋರನಹಳ್ಳಿ ಮಂಡಲದ ಪ್ರಧಾನ ಗಣಪತಿರಾಯ ಜೋಳದ ಸಿಕ್ಕಿದರು.

"ಏನು ಮಂಡಲಾಧಿಪತಿಗಳೇ ಹೇಗೆ ನಡೆದಿದೆ ನಿಮ್ಮ ದರಬಾರು?"

ಎಂಬ ನನ್ನ ಪ್ರಶ್ನೆಗೆ ಗಣಪತಿರಾಯ ಸ್ವಲ್ಪ ಹೊತ್ತು ಯೋಚಿಸಿದರು. ಈ ಗಣಪತಿರಾಯ ನಾನು ಬಹಳದಿನಗಳಿಂದ ಬಲ್ಲಂತೆ ತುಂಬಾ ಸಂಕೋಚದ ಮನುಷ್ಯ. ಸಾರ್ವಜನಿಕ ಜೀವನದಲ್ಲಿ ಮುಖ್ಯವಾಗಿ ಇರಬೇಕಾದ ಹಸ್ತಶುದ್ಧಿ ಈತನಿಗುಂಟು. ಜನಸೇವೆ ಎಂಬುದು ಕೆಲವರಿಗೆ ಹಣ ಗಳಿಕೆಯ ಸಾಧನವಾಗಿದ್ದರೆ ಈ ಮಾರಾಯನಿಗೆ ಹಣ ಹಾಳು ಮಾಡಿಕೊಳ್ಳುವ ವಿಧಾನ. ನನ್ನ ಪ್ರಶ್ನೆ ಬೇಗ ಅರ್ಥವಾಯಿತೋ ಇಲ್ಲವೋ ಕೊನೆಗೆ ಹೇಳಿದರು.

"ಏನಂತ ಹೇಳುಮರಿ ಭಾಳ ಬ್ಯಾಸರಾಗ್ಯಾದ..."

"ಏನು ನಿಮ್ಮಂಥವರೇ ಹೀಗೆ ಹೇಳಿ ಹಿಂದೇಟು ಹಾಕಿದರೆ' ನಿಮ್ಮ ಜಾಗದ ಮೇಲೆ ಬಂದು ಕೂಡಾಕ ಎಂಥವರು ಬರ್ತಾರಂತ ತಿಳಿದೀರಿ !"

"ಅದೆಲ್ಲ ಬರೋಬ್ಬರೀರಿ... ಆದ್ರ ನಮ್ಮಂಥವರಿಗಿ ಇದೆಲ್ಲ ನಡೆಂಗಿಲ್ಲ"

"ಯಾಕೆ ಈಗ ನಿಮಗ ಅಂತ ಆಪತ್ತು ಬಂದಿರೋದಾದರೂ ಯಾವುದು ?"

"ಆಪತ್ತು ಗೀಪತ್ತು ಯಾವುದು ಇಲ್ಲಬಿಡ್ರಿ...ಆದ್ರೆ..."

ಎಂದು ಮತ್ತೆ ಏನೋ ಹೇಳಬೇಕೆಂದಿದ್ದುದನ್ನು ನುಂಗಿಕೊಳ್ಳ ತೊಡಗಿದರು. ನನಗೆ ಇದು ಗೊತ್ತಾಗಿ ಅದೇನಿದ್ದರೂ ಹೇಳಿ ಯಾಕೆ ಹೆದರಿಕೆ ? ಎಂದೆ,

"ಈಗ ನೋಡ್ರಿ, ಸರಕಾರದೋರು IRDP ಸಾಲ ಅಂತ ಕೊಡ್ತಾರ. ಇಡೀ ಮಂಡಲಕ್ಕ ನಲವತ್ತು ಮಂದಿಗಿ ಮಾತ್ರ ಅದನ್ನ ಹಂಚಬೇಕು ಅಂತ ಹೇಳ್ತಾರ. ಅವರಾಗ ಅರ್ಧಕರ್ಧ ಅಂದ್ರ ಇಪ್ಪತ್ತು ಮಂದಿಗಿ ಹರಿಜನರ ಕೋಟಾ ಪ್ರಕಾರ ಅವರಿಗಿ ಕೊಡಬೇಕಾಗ್ತದ. ಉಳಿದ ಇಪ್ಪತ್ತು ಮಂದೀದನ್ನು ಯಾರಿಗೆಂತ ಕೊಡಬೇಕು ? ನೀವೇ ಹೇಳಿ!'

"ಹೌದು ಬಿಡ್ರಿ ಆದ್ರೂ ಊರವರಾದ ನಿಮಗೇ ಆ ಬಗ್ಗೆ ಹೆಚ್ಚೀಗಿ ಗೊತ್ತಿರ್ತಾದ. ನೀವೇ ಅಂಥವರನ್ನ ಆರಿಸಬೇಕು"

"ಇಲ್ಲೇ ತೋಂದ್ರಿ ಬಂದಿರೋದ್ರಿ ! ಯಾರ ಹೆಸರಿಲೆ ಹೊಲಾಮನಿ ಇರಂಗಿಲ್ಲೋ ಅಂಥವರೀಗಿ ಸಾಲ ಕೊಡಬೇಕು ಅಂತ ನಿಯಮ ಐತಿ. ಆದರೆ ಬೇಕಾದಂಗ ಹೊಲಮನಿ ಇದ್ದ ಶ್ರೀಮಂತರ ಮಕ್ಕಳೇ ಬರ್ತಾರ. ನಮ್ಮ ಹೆಸರೀಲೆ ಹೊಲಾಮನಿ ಐತೇನು ನೋಡ್ರಿ ಅಂತಾರ. ಅಂದಹಾಗೆ ಅವರ ಹೆಸರೀಲೆ ಏನೂ ಇರಂಗಿಲ್ಲ. ಎಲ್ಲಾ ಅವರಪ್ಪನ ಹೆಸರೀಲೇ ಇರ್ತಾದ. ಆಗ ನಾವು ಯಾಂಗೆಂತ ಕೊಡಬೇಕು ನೀವೇ ಹೇಳಿ!..."

"ನಿಜ! ಆದ್ರೆ ಇಷ್ಟು ಮಾತ್ರಕ್ಕೇ ಬೇಸರಗೊಂಡ್ರೆ ಹೇಗೆ ? ಇದೆಲ್ಲ ಮಾಮೂಲಿ ! ಇದಿರ್ಲಿಬಿಡಿ, ನಿಮ್ಮ ಕೆಲಸಧಾಗ ಮತ್ತೆ ಏನಾದರೂ ಅಡ್ಡಿ ಆತಂಕ ಬರ್ತಾವೇನು ? ಯಾರಾದರೂ ಅಧಿಕಾರಿಗಳು, ರಾಜಕಾರಣಿಗಳು ಹಸ್ತಕ್ಷೇಪ ಮಾಡ್ತಾರೇನು ? ಅಥವಾ ನಿಮ್ಮ ಮಂಡಲದ ಸದಸ್ಯರೇ ಏನಾದರೂ ಗೊಂದಲ ಹಾಕ್ತಾರೇನು ?"

"ಖರೇ ಹೇಳ್ಬೇಕಂದ್ರ ನಮ್ಮ ಪಂಚಾಯತಿ ಸದಸ್ಯರೆಲ್ಲ ಒಳ್ಳೆಯ ಸಹಕಾರ ಕೊಡ್ತಾರ. ಈವರೆಗೆ ಯಾವುದೇ ಭಿನ್ನಾಭಿಪ್ರಾಯ ಬಂದಿಲ್ಲ."

"ಇಷ್ಟಿದ್ದೂ ನೀವು ಗೋಣಗಾಟ ಮಾಡ್ತೀರಲ್ರಿ ಯಾಕೆ ?"

ಎಂದು ನಾನು ತುಸು ಮೂದಲಿಕೆ, ತುಸು ತಮಾಷೆ ಬೆರಿಸಿ ಕೇಳುತ್ತಿದ್ದಾಗ, ಅವರ ಪ್ರಿಯ ಮಿತ್ರರೊಬ್ಬರು ನಡುವೆ ಬಾಯಿ ಹಾಕಿ, ನನ್ನ ಮಾತನ್ನೇ ಎತ್ತಿ ಹೇಳಿದರು. ಆಗ ಗಣಪತಿ ಜೋಳದರಿಗೆ ಸ್ವಲ್ಪ ಸ್ಫೂರ್ತಿ ಬಂದಂಗೆ ಕಂಡಿತು.

"ಅಲ್ರೀ ಯಾವುದಾದರೂ ಕೆಲಸ ಇರ್ತಾದ. ಅದಕ್ಕ ರೊಕ್ಕ ಇಲ್ಲದಿದ್ರ ಆಗ್ತಾದ ? ಅವನ್ನ ತರಲಾಕ ಅಂತ ಹೋದ್ರ S.T.O. ದಾಗ ಅಷ್ಟುಕೊಡು, ಇಷ್ಟುಕೊಡು ಅಂತ ಕಾಡಸ್ತಾರ..."

"ಅವರು ಬೇಕಾದಷ್ಟು ಕಾಡಸಲಿ ! ನೀವ್ಯಾಕ ಕೊಡ್ತೀರಿ"

"ಮೊದಲು ನಾನೂ ಹಂಗೇ ಹೇಳಿದ್ದೆ. S.T.O. ದವರು ಏನಾದರೂ 'ಕಾಗದಪತ್ರದ ಅಬ್ಜೆಕ್ಶನ್ ಮಾಡಿದ್ರ ಹೋಗಿ ಅದನ್ನ ಸರಿ ಮಾಡಿ ಬರ್ರಿ' ಅಂತ ಸೆಕ್ರೆಟರಿಗೆ ಹೇಳಿದ್ರೆ ವಾರಾ ನುಗಟ್ಟಲೆ ತಿರುಗಿಸ್ತಿದ್ರು. ಆಮೇಲೆ ಬಿಲ್ ಪಾಸು ಮಾಡ್ತಿದ್ರು. ಅಷ್ಟು ಹೊತ್ತಿಗಿ ನಮ್ಮ ಕೆಲಸೆಲ್ಲ ಕೆಟ್ಟುಹೋಗಿ ಬಿಡ್ತಿತ್ತು. ಒಂದು ಸಲ ಹಿಂಗೆ ಆಯ್ತು. ಐವತ್ತು ಸಾವಿರ ರೂ. ಗಳನ್ನ ನಾನು ಸ್ವಂತ ಕೈಲಿಂದ ಹಾಕಿ ಕೆಲಸಗಾರರಿಗೆ ಕೊಟ್ಟುಬಿಟ್ಟೆ. ಆಮ್ಯಾಲ ಬಂದಾಗ ಅದನ್ನ ತಗೊಂಡೆ..."

"ಹಂಗಂದ್ರೆ ಈಗಲೂ ಅವರಿಗೆ ನೀವು ಕೈಬೆಚ್ಚಗೆ ಮಾಡ್ತೀರೊ ? ಅಥವಾ ಹಾಗೇ ಮಾಡಿಸಿಕೊಂಡು ಬರುತ್ತೀರೋ ?"

"ನಂ ಸೆಕ್ರೆಟರಿಗೆ ಹೇಳಿ ಬಿಟ್ಟೇವಿ. ಸುಡಗಾಡ ಸೇರಿ ಅವರೇನು ಕೇಳ್ತಾರೋ ನೀವೇ ಕೊಟ್ಟು ಕೆಲಸ ಮಾಡಿಸಿಕೊಂಡ ಬರ್ರಿ ಅಂತ ಅವನ ಕಡೆಗೇ ಒಪ್ಪಿಸ್ಸೀನಿ'

"ಹಂಗಂದ್ರ ಕೊಡೋದು, ತಗೊಳ್ಳೋದು ನಡದಾದ ಅಲ್ಲ !"

"ಅದನ್ನೇನು ಕೇಳ್ತೀರಿ ಬಿಡಿರಿ. ಅದು ಹಂಗೆ ನಡೆಯೋದ" ಎಂದು ಬೇರೆ ವಿಷಯ ಮಾತಾಡಹತ್ತಿದರು. ಮತ್ತೆ ನಿಮಗೆ ಬೇರೆ ಯಾರ್ಯಾರು ಕಾಡುತ್ತಾರೆ ? ಬಿಡಿಓ ದವರೆ ? ತಹಶೀಲದವರೆ ? ಎಂದು ಕೇಳಿದರೆ ಅವರಾರೂ ಇಲ್ಲ ಅಂತ ಹೇಳಿದರು, ನಿಮ್ಮ ಜೆ. ಇ ಹೇಗಿದ್ದಾರೆ? ಅಂತ ಕೇಳಿದರೆ "ಇದ್ದುದರಲ್ಲೇ ಉತ್ತಮ. ಆದರೆ ಅವರೂ ತಮ್ಮ ಪರ್ಸಂ-ಟೇಜ್ ಇಲ್ಲದೇ ಬಿಡಂಗಿಲ್ಲ" ಎಂದು ವಿಷಾದಿಸಿದರು.

ಈಗ ಯಾವುದೇ ವ್ಯಕ್ತಿ ಎಷ್ಟೇ ಒಳ್ಳೆಯನಾಗಿದ್ದಾಗಲೂ ಅವನು ತನ್ನ ಪಾಡಿನ ಕೆಲಸ ತಾನು ಮಾಡಿಕೊಂಡು ಹೋಗಬೇಕಾದರೆ ಒಂದೇ ಸಮ ಏಗ ಬೇಕಾದಪರಿಸ್ಥಿತಿ ಇದೆ.ಹಾಗಾದರೆ ಈ ಜೋಳದ ಗಣಪಯ ಗೋಣಗಾಟಗಳಿ ಕೊನೆ ಇಲ್ಲವೆ ?

---

(41 ನೇ ಪುಟದಿಂದ ಬಂದಿದ್ದು)

ಬರಲಿಲ್ಲ. "ಹೋಗಲೇ ನಿಮ್ಮದೇನು ಕಿರಿಕಿರಿ? ನಮ್ಮದು ನಮಗೇ ಆಗ್ಯಾದ" ಎಂದರು. ಸಿಟ್ಟಿಗೆದ್ದ ಗೌಡ, ತನ್ನೆಲ್ಲ ಪ್ರಜರನ್ನು ಕಳಿಸಿ ಅವರನ್ನು ಒತ್ತಾಯದಿಂದ ಹಿಡಕೊಂಡು ಬನ್ನಿರಿ ಎಂದು ಅಪ್ಪಣೆ ಮಾಡಿದನು. ಅಂದಂತೆ ಎಲ್ಲಾ ಪ್ರಜರೂ ಹೋಗಿ ಅವರನ್ನು ಅಡ್ಡಗಟ್ಟಿ ಹಿಡಿತಂದು ಗೌಡನ ಮುಂದೆ ನಿಲ್ಲಿಸಿ, "ಸಲಾಮು ಹೊಡಿರಿ" ಎಂದರು. ಉಪಾಯಗಾಣದ ಬಣಜಿಗ ಗಾಣಿಗರು, ಸಲಾಮು ಹಾಕಿ ತಮ್ಮ ಅಹವಾಲು ಹೇಳಿಕೊಂಡರು. ತಮ್ಮದು ಇಂಥ ಪರಿಸ್ಥಿತಿ ಆಗಿದೆಯೆಂದೂ ಆದ್ದರಿಂದ ನಮ್ಮಷ್ಟಕ್ಕ ನಾವೇ ಹೋಂಟಿದ್ದಿವಿ ಎಂದೂ ಕೇಳಿಕೊಂಡರು.

ಬಣಜಿಗ ಗಾಣಿಗರಿಬ್ಬರ ಸಮಸ್ಯೆಯನ್ನು ಕೇಳಿತಿಳಿದ, ಆ ದನಕಾಯುವ ಗೌಡನು,

"ಓಸ...ಇದಿಷ್ಟಕ್ಕೇ ನೀವು ಇಷ್ಟೊಂದು ಚಿಂತೆ ಮಾಡುತ್ತೀರಾ ? ಇದೇನು ಮಹಾ ? ಇನ್ನೊಂದು ತಾಸೊತ್ತು ಬಿಟ್ಟು ಹೇಳ್ತಿನಿ. ಅದರಂತೆ ನೀವು ಮಾಡಿ ಎಲ್ಲ ಪರಿಹಾರ ಆಗುತ್ತದ" ಎಂದನು.

"ಹ್ಞಾ! ಹೌದಾ ?" ಎಂದು ಅವರಿಬ್ಬರು ಗಾಬರಿಗೊಂಡರು.

ಅಂದಂತೆ ಆ ದನ ಕಾಯುವ ಗೌಡ ಅವರ ಸಮಸ್ಯೆಯನ್ನು ಪರಿಹರಿಸಿದನು. ಅದರ ಹೇಗೆ ? ಇದನ್ನು ಹೇಳಿದವರಿಗೆ ಅಗ್ನಿ ಅಂಕುರದ ಒಂದು ಪ್ರತಿ ಮನೆ ಬಾಗಿಲಿಗೆ ಬರುತ್ತದೆ.

ಕ್ರೀಡಾ ಜಗತ್ತು

# ಜಿಮ್ನಾಸ್ಟಿಕ್ ಜಗತ್ತಿನ ರಾಣಿ ನಾದಿಯಾಗೆ ಮತ್ತೆ ಕರೆ

ಜಿಮ್ನಾಸ್ಟಿಕ್ ಜಗತ್ತಿನ ಪರಿಚಯು ಇರುವ ಎಲ್ಲರೂ ಬಹುಶಃ 'ನಾದಿಯಾ ಕುಮಾನಿಚ್'ಳ ಹೆಸರನ್ನು ಕೇಳಿದ್ದಾರೆ. 1970ರ ದಶಕದಲ್ಲಿ ಜಿಮ್ನ್ಯಾಸ್ಟಿಕ್ ಜಗತ್ತನ್ನೇ ಬೆರಗುಗೊಳಿಸಿದ ಈ ಬಾಲೆ ಈ ಕ್ರೀಡೆಯಲ್ಲಿ ಭಾಗವಹಿಸಲು ಬೇಕಾಗುವ ದೇಹಧಾರ್ಢ್ಯ ಅಳತೆ, ತೂಕ, ಚಾಕಚಕ್ಯತೆ ಇತ್ಯಾದಿಗಳನ್ನು ತನ್ನ ಹದಿನಾಲ್ಕರ ಎಳೆ ವಯದಲ್ಲೇ ಪಡೆದಿದ್ದಳು. ಆ ಎಳೆ ವಯುದಲ್ಲಿ ಆಕೆ ಪಡೆದಿದ್ದ ಪದಕಗಳಿಗೆ ಲೆಕ್ಕವಿರಲಿಲ್ಲ, ಮಾತ್ರವಲ್ಲ ಆಗಲೇ ಚಿನ್ನದ ಪದಕವನ್ನೂ ಪಡೆದು ಎಲ್ಲರ ಕಣ್ಣು ಕೋರೈಸಿದ್ದಳು.

ಚಿನ್ನದ ಪದಕ ಗೆದ್ದು ತಂದ ಈ ನಾದಿಯಾಳಿಗೆ ರುಮೇನಿಯಾ ದೊರೆ ಕಮ್ಯುನಿಸ್ಟ್ ಚಾಸೆಸ್ಕೋ ಕೃತಜ್ಞತಾಪೂರ್ವಕವಾದ ಸಾಗತವನ್ನೇನೋ ನೀಡಿದ. ಆದರೆ ಬಡತನದಲ್ಲಿ ಬೇಯುತ್ತಿದ್ದ ಈ ನಾದಿಯಾ ಹಣದಾಸೆಗಾಗಿ, ಆ ಕಮ್ಯುನಿಸ್ಟ್ ದೊರೆ ಹೇಳಿದ ಕೆಲಸ ಮಾಡಿಕೊಂಡು ಇರಬೇಕಾಯಿತು. ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತೆಯಾಗಿ ಆಕೆ ಆಗ ಬಳಕೆಗೊಳ್ಳಬೇಕಾಯಿತು. ಇದೇ ಅವಧಿಯಲ್ಲಿ ಆ ಕಮ್ಯುನಿಸ್ಟ್ ದೊರೆಯ ಮಗನ ಕಣ್ಣು ನಾದಿಯಾಳ ಮೇಲೆ ಬಿತ್ತು. ಆದರೆ ನಾದಿಯಾ ಆ ಹೊತ್ತಿಗಾಗಲೇ ಫುಟ್‌ಬಾಲ್ ಆಟಗಾರನೊಬ್ಬನನ್ನು ಪ್ರೀತಿಸುತ್ತಿದ್ದಳು,

ಜಿಮ್ನಾಸ್ಟಿಕ್ ಆಕೆಯು ಜೀವ ಜೀವಾಳವಾದ್ದರಿಂದ ಆಕೆ ಪುನಃ 1980 ರ ಒಲಿಂಪಿಕ್ಸ್‌ನಲ್ಲಿ ಭಾಗವಹಿಸಿದಳು. ಆದರೆ ಆಗ ಕೇವಲ ಒಂದು ರಜತ ಪದಕ ಮಾತ್ರ ಪಡಕೊಂಡಳು.

1984 ರಲ್ಲಿ ಮತ್ತೆ ನಡೆದ ಒಲಂಪಿಕ್ಸ್‌ದಲ್ಲಿ ಅದೇ ಚಾಸೆಸ್ಕೋನ ಸರ್ವಾಧಿಕಾರಿ ಮನೋಭಾವದಿಂದಾಗಿ ನಾದಿಯಾ ಭಾಗವಹಿಸಲಿಲ್ಲ. ಇದನ್ನು ಸಹಿಸದ ನಾದಿಯಾ 1985 ಡಿಸೆಂಬರ್ ಮೊದಲವಾರದಲ್ಲಿ ಮಿಲಟರಿಯ ಎಲ್ಲ ಹದ್ದುಗಣ್ಣುಗಳಿಂದಲೂ ತಪ್ಪಿಸಿಕೊಂಡು, ತನ್ನ ದೇಶ ತೊರೆದು ಬಂದು ಅಮೇರಿಕೆ ಸೇರಿದಳು.

ಆದರೆ ಮತ್ತೆ ಈಗ ಜಿಮ್ನಾಸ್ಟಿಕ್ ಜಗತ್ತಿನ ಕ್ರೀಡಾಪ್ರೇಮಿಗಳು ಹಾಗೂ ಅಲ್ಲಿನ ಸರಕಾರ ಕೂಡ ಆಕೆಯನ್ನು ಮರಳಿ ತನ್ನ ದೇಶಕ್ಕೆ ಬರುವಂತೆ ಮತ್ತೆ ಜಿಮ್ನಾಸ್ಟಿಕ್ ಕ್ರೀಡೆಗಳಲ್ಲಿ ಭಾಗವಹಿಸುವಂತೆ ಆಹ್ವಾನಿಸುತ್ತಿದ್ದಾರೆ.

ಆಗಲೇ ಚದರಿದ ಹರಿಣಿಯಂತಾಗಿರುವ ಈ ಜಿಮ್ನಾಸ್ಟಿಕ್ ರಾಣಿ ನಾದಿಯಾ ತನ್ನ ದೇಶಕ್ಕೆ ವಾಪಾಸಾಗುವಳೋ? ಇಲ್ಲವೋ ಕಾದುನೋಡಬೇಕು.



ದೇವು ಪತ್ತಾರ

# ಸಿನಿ ಸುದ್ದಿ

## ಪ್ರತಿಭೆಗೆ ಸವಾಲೆನಿಸುವ ಪಾತ್ರ ಬೇಕು: ವಿನಯಾಪ್ರಸಾದ

ಉಡುಪಿಯ ಪೂರ್ಣ ಪ್ರಜ್ಞ ಕಾಲೇಜಿನಲ್ಲಿ ಬಿಕಾಂ ಮುಗಿಸಿದ ವಿನಯಾ ಬೆಳ್ಳಿತೆರೆಗೆ ಬಂದದ್ದು ತೀರಾ ಆಕಸ್ಮಿಕ. ಉಡುಪಿಗೆ ಸಮೀಪ ಬಾರಕೂರಿನ ಅರಮನೆಯಲ್ಲಿ ಜಿ. ವಿ. ಅಯ್ಯರ್ ಅವರ 'ಮಧ್ವಾಚಾರ್ಯ' ಶೂಟಿಂಗ್ ನಡೆದ ಸಮಯ ಇದ್ದಕ್ಕಿದ್ದಂತೆ ಚಿತ್ರಕ್ಕಾಗಿ ಅಯ್ಯರ್‌ಗೆ ನಾಲ್ವರು ಹುಡುಗಿಯರ ಅಗತ್ಯ ಬಿತ್ತು. ಆ ನಾಲ್ವರಲ್ಲಿ ಒಂದಾಗಿ ಅನಿರೀಕ್ಷಿತವಾಗಿ ಬಂದ ವಿನಯಾ ಇಂದು ಬೆಳ್ಳಿ ತೆರೆಯಲ್ಲಿ ವಿಶಿಷ್ಟ ಪಾತ್ರಗಳ ಮೂಲಕ ರಸಿಕ ಪ್ರೇಕ್ಷಕರೆದೆಯಲ್ಲಿ ತನ್ನ ಛಾಪು ಒತ್ತಿದ್ದಾಳೆ.

'ಗಣೇಶನ ಮದುವೆ'ಯಲ್ಲಿ ಅನಂತ್‌ನಾಗರೊಂದಿಗೆ ನಾಯಕಿಯಾಗಿ, ಗಯ್ಯಾಳಿ ಹುಡುಗಿಯಾಗಿ ಅಮೋಘ ಅಭಿನಯದಿಂದ ನಿರ್ಮಾಪಕರ ಗಮನ ಸೆಳೆದ ವಿನಯಾ ಮೊದಮೊದಲು ಸಹನಟಿಯಾಗಿ ಕಾಣಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಪೋಲೀಸ್‌ನ ಹೆಂಡ್ತಿಯಲ್ಲಿ ದೇವರಾಜ್‌ನ ಹೆಂಡ್ತಿಯಾಗಿ ಅಳುಮುಂಜಿ ಪಾತ್ರವಹಿಸಿದ ವಿನಯಾಗೆ ಈಗ ಕೈತುಂಬಾ ಕೆಲಸ.

ಹಾವು ಏಣಿಯಾಟ ಖ್ಯಾತಿಯ ಚಿತ್ರ ನಿರ್ದೇಶಕ ಎ. ಆರ್. ಕೆ. ಪ್ರಸಾದ್‌ರೊಂದಿಗೆ ಆಕೆಗಿದ್ದ ಪರಿಚಯ ಸ್ನೇಹವಾಗಿ, ಸ್ನೇಹ ಪ್ರೇಮವಾಗಿ ಪ್ರೇಮ ಮದುವೆಯಲ್ಲಿ ಮುಕ್ತಾಯಗೊಂಡು ವಿನಯಾ ಪ್ರಸಾದ್ ಎಂದು ಕರೆಸಿಕೊಂಡಳು. ಈಗ 'ಪ್ರಥಮ'ಳ ತಾಯಿಯೂ ಹೌದು. ತಾಯಿಯಾಗುವ ಮೊದಲಿನ ಸೌಂದರ್ಯವನ್ನು ಇಂದೂ ಉಳಿಸಿಕೊಂಡಿರುವ ವಿನಯಾಗೆ ತಾಯ್ತನದ ಹೆಮ್ಮೆ ಅಪಾರ.

ಮದುವೆಯ ನಂತರ ಜಿ. ವಿ. ಅಯ್ಯರ್ ಅವರ ಸನ್ಮಾನ ಸಮಾರಂಭವೊಂದರಲ್ಲಿ ತಾರೆ ಆರತಿಯ ಕಣ್ಣಿಗೆ ಬಿದ್ದ ವಿನಯಾ ಅವರ "ನಮ್ಮ ನಮ್ಮಲ್ಲಿ" ಧಾರಾವಾಹಿ ಮೂಲಕ ಕಿರುತೆರೆಗೆ ಬಂದರು. ಒಂದೆರಡು ವರ್ಷ ಸಂಸಾರದ ಸರಿಗಮ ಪದನಿಸ ಮೀಟಿದ ವಿನಯಾ ಮತ್ತೆ 'ಬದುಕು ಬಣ್ಣದ ಚಿತ್ತಾರ'ದ ಮೂಲಕ (ಟಿ. ವಿ. ಧಾರಾವಾಹಿ) ಪರದೆಗೆ ಬಂದು ಲೆಕ್ಕವಿಡಲಾಗದಷ್ಟು ದಾರಾವಾಹಿಗಳಲ್ಲಿ ಮಿಂಚಿದರು.

ಫಣಿ ರಾಮಚಂದ್ರರ 'ಗಣೇಶನ ಮದುವೆ'ಯ ಯಶಸ್ಸಿನಿಂದಾಗಿ ವಿನಯಾಗೆ ಪೋಲಿಸ್ ಬೆಲ್ಟ್, ನೀನು ನಕ್ಕರೆ ಹಾಲು ಸಕ್ಕರೆ, ಶ್ವೇತಾಗ್ನಿ ಮುಂತಾದ ಚಿತ್ರಗಳಲ್ಲಿ ನಾಯಕಿಯ ಅವಕಾಶಗಳು ಸಿಕ್ಕವು.

'ಚಿತ್ರದುದ್ದಕ್ಕೂ ನಾನು ನನ್ನ ಮುಖವನ್ನೇನು ಬಯಸಲಾರೆ. ಆದರೆ ಚಿತ್ರದಲ್ಲಿ ಇರುವಿಕೆಯನ್ನು ಗಮನಿಸುವಂತಹ, ಪ್ರತಿಭೆಗೆ ಸವಾಲೆಸುವ ಮನಸ್ಸಿನಲ್ಲಿ ನಿಲ್ಲುವಂತಹ ದೃಶ್ಯಗಳ ಪಾತ್ರ ನನಗೆ ಬೇಕು'' ಎಂಬುದು ವಿನಯಾರ ಸ್ಪಷ್ಟ ನಿಲುವು. ಮೈ ಪ್ರದರ್ಶನವನ್ನು ಕಟುವಾಗಿ ವಿರೋಧಿಸುವ ವಿನಯಾ ಮಡಿವಂತೆ ಏನೂ ಅಲ್ಲ. ಇಡೀ ಚಿತ್ರದಲ್ಲಿ ಸೆಕ್ಸ್ ಇದ್ದರೆ ಒಂದಿಂಚೂ ಮೈ ಪ್ರದರ್ಶಿಸದೆ 'ಸೆಕ್ಸ್‌ಫುಲ್' ಎನ್ನುವಂತೆ ಮಾಡಬಹುದು ಎಂದು ವಿನಯಾ ಅಭಿಪ್ರಾಯಪಡುತ್ತಾರೆ.

● ಉಮಾತನಯರಾಜ

# ಪ್ರತಿಭಾನ್ವಿತ ನಿರ್ದೇಶಕ ರಾಜೇಂದ್ರಸಿಂಗ್ ಬಾಬು

ಕನ್ನಡ ಚಿತ್ರರಂಗದ ಪ್ರತಿಭಾನ್ವಿತ ನಿರ್ದೇಕರಲ್ಲಿ ಎಸ್. ವಿ. ರಾಜೇಂದ್ರಸಿಂಗ್ ಬಾಬು ಅವರು ಒಬ್ಬರು, ತನ್ನ ನಿರ್ದೇಶನದ ಚಿತ್ರಗಳಲ್ಲಿ ಏನಾದರೊಂದು ಹೊಸತನವನ್ನು ತುಂಬುವ ಮೂಲಕ ಯಾವತ್ತೂ ಸುದ್ದಿಯಲ್ಲಿರುವ ವ್ಯಕ್ತಿ, ಉತ್ತಮ ತಂತ್ರಜ್ಞರೆನಿಸಿಕೊಂಡಿರುವ ಬಾಬು ಕನ್ನಡ ಚಿತ್ರರಂಗಕ್ಕೆ ತನ್ನವೇ ಆದ ಕೆಲ ಮೌಲ್ಯಗಳನ್ನು ನೀಡಿದ್ದಾರೆ,

ದಿ. ಶಂಕರಸಿಂಗ್ ಅವರ ಪುತ್ರನಾದ ಬಾಬು ಚಿತ್ರರಂಗ ಪ್ರವೇಶಿಸಿದ್ದು ಬಾಲ ನಟನಾಗಿ. ಹಲವಾರು ಚಿತ್ರಗಳ ಚಿತ್ರಿಕರಣಗಳಲ್ಲಿ ಭಾಗವಹಿಸಿದ ಇವರಿಗೆ ಆಸಕ್ತಿ ಹುಟ್ಟಿದ್ದು ನಿರ್ದೇಶನದತ್ತ 'ನಾಗಕನ್ಯೆ' ಎಂಬ ಪ್ರಥಮ ಚಿತ್ರ ನಿರ್ದೇಶಿಸಿ ನಿರ್ದೇಶಕರಾದರು.

ಕಿಲಾಡಿ ಜೋಡಿ, ಗಂಡಭೇರುಂಡದಂತಹ ಕಳಪೆ ಚಿತ್ರಕಥೆಯ ಚಿತ್ರದಲ್ಲೂ ಉತ್ತಮ ತಾಂತ್ರಿಕತೆಯಿಂದ ಮಿಂಚಿದರು. 'ನಾಗರಹೊಳೆ' ಎಂಬ ಮಕ್ಕಳ ಚಿತ್ರ ಅಭಿನಯ ಹಾಗೂ ಹೊಸತನದ ಕತೆಯಿಂದ ಹೆಸರು ತಂದುಕೊಟ್ಟಿತು. ನಂತರ 'ಅಂತ' ಎಂಬ ರಾಜಕೀಯ ಚಿತ್ರ ನಿರ್ದೇಶಿಸಿ ಇಂತಹವೇ ಚಿತ್ರಗಳ ಪರಂಪರೆಗೆ ಚಾಲನೆ ನೀಡಿದರು.

ವ್ಯಾಪಾರಿ ಚಿತ್ರಗಳನ್ನೆ ಜಾಸ್ತಿ ನೆಚ್ಚಿಕೊಂಡಿದ್ದ ಬಾಬು ತಾವೊಬ್ಬ ಸಂವೇದನಾಶೀಲ ನಿರ್ದೇಶಕ ಎಂಬುದನ್ನು 'ಬಂಧನ' ಚಿತ್ರದಲ್ಲಿ ತೋರಿಸಿಕೊಟ್ಟರು. 1984 ರಲ್ಲಿ ಈ ಚಿತ್ರಕ್ಕೆ ಅತ್ಯುತ್ತಮ ಪ್ರಾದೇಶಿಕ ಚಿತ್ರ ಎಂಬ ಪ್ರಶಸ್ತಿಯೂ ಬಂತು.

ಬಣ್ಣದ ಗೆಜ್ಜೆ ಹಾಗೂ ಮುತ್ತಿನಹಾರ ಎಂಬ ಇತ್ತೀಚಿನ ಚಿತ್ರಕ್ಕೆ ಸುರಿದ ದುಡ್ಡು ಅಪಾರ, ಆದರೆ ಇವು ಯಶಸ್ವಿ ಚಿತ್ರಗಳಾಗಲಿಲ್ಲ. ತಲೆ ಮೇಲೆ ಕೈ ಹೊತ್ತುಕೊಂಡು ತೆಪ್ಪಗೆ ಕುಳಿತ ಬಾಬುಗೆ ಚೇತನ ನೀಡಿದ್ದು 1990ನೇ ಸಾಲಿನ ಅತ್ಯುತ್ತಮ ಚಿತ್ರ ಕಲೆ ಹಾಗೂ ನಿರ್ದೇಶನಕ್ಕೆ 'ಮುತ್ತಿನಹಾರ' ಆಯ್ಕೆಯಾದದ್ದು ನಿಜಕ್ಕೂ ಇದು ಪ್ರಯತ್ನಕ್ಕೆ ಸಂದ ಗೌರವವಾಗಿದೆ. ಇದೊಂದು ಉತ್ತಮ ತಾಂತ್ರಿಕ ಅಂಶ, ಮನೋಜ್ಞ ನಟನೆ, ಅಹ್ಲಾದವನ್ನುಂಟು ಮಾಡುವ ದೃಶ್ಯ. ಉತ್ತಮ ಕತೆಯನ್ನೊಳಗೊಂಡ ಚಿತ್ರ ಎಂದರೆ ಅತಿಶಯೋಕ್ತಿ ಆಗಲಾರದು,

ಹಲವಾರು ದಿನಗಳಿಂದ ಸುಮ್ಮನೆ ಕುಳಿತುಕೊಂಡ ಬಾಬು ಮತ್ತೆ ಚಿತ್ರ ನಿರ್ಮಾಣಕ್ಕೆ ತೊಡಗುವರೇ ಎಂಬುದು ಸದ್ಯದ ಪ್ರಶ್ನೆ.



## ಹರಿಶ್ಚಂದ್ರ ನಾಪತ್ತೆ !

ಸತ್ಯ ಹರಿಶ್ಚಂದ್ರ
ಬದುಕಿದ್ದಾಗ
ನಾನಿರಲಿಲ್ಲ !

ಈಗ ನಾನಿದ್ದೇನೆ
ಸತ್ಯ ಹರಿಶ್ಚಂದ್ರ
ಪತ್ತೆ ಇಲ್ಲ !
ವಿಳಾಸ ಗೊತ್ತಿದ್ದವರು
ತಿಳಿಸುವಿರಾ ?

○ **ಸೂಗುರುಮಠ**

# ಕದಲ ಬದಲ ವಡೇಕಾಯಿ

ವಿನೋದ ಪಾಂಡು ಜಮಖಂಡಿ

* ಪ್ರಜ್ಞಾವಂತ ಮತದಾರ ಈಗ ಏನು ಮಾಡುವುದು ?

– ಅಜ್ಞ ಮತದಾರರ ಮುಂದೆ ಹೊಯ್ ಕೊಳ್ಳುವುದು.

ಸೀತಾ ಎನ್. ಪುರತಗೇರ ಬೈಚಬಾಳ

* ರಾಜಕಾರಣಿಗಳು ಜ್ಯೋತಿಷಿಗಳನ್ನು ನಂಬಲು ಕಾರಣ ?

– ಕಳ್ಳ ಕಳ್ಳನನ್ನು ನಂಬುತ್ತಾನೆ.

ಶ್ರೀನಿವಾಸ ಎಚ್. ಬಾಲ್ಕಿ

* ನಿಮಗೆಂದಾದರೂ ದೇವರು ಕಂಡಿರುವನೆ ? ಹೇಗಿದ್ದಾನೆ ?

– ಓ!ss... ದೇವರು ಇದ್ದಾನೆಯೆ ?

ಕು. ಸುಜಾತ ಮುದ್ದೆಬಿಹಾಳ

* ಎಷ್ಟು ಪ್ರಯತ್ನಿಸಿದರೂ ಬಾರದ ನಿದ್ದೆ ಕಾಲೇಜಿನ ನಮ್ಮ ಮೇಡಂ ಪಾಠ ಶುರುವಾದೊಡನೆ ಬರಲು ಕಾರಣ ?

– ಆಕೆ ಕುಂಭಕರ್ಣೆ ಅಂತ ಈಗಲಾದರೂ ಗೊತ್ತಾಯಿತೇ !

ರಘುನಾಥಭಟ್ಟ ಕಲ್ಕೇರಿ ಬಿಜಾಪುರ

* ಗಾಂಧಿ ಚಿತ್ರವನ್ನು ವಿದೇಶಿಯರು ತಯಾರಿಸಲು ಕಾರಣ ?

– ಈಗ ಗಾಂಧೀಜಿ ಅವರಿಗೇ ಹೆಚ್ಚು ಹತ್ತಿರ

ಮಂದಾಕಿನಿ ಮಂದರವಾಡ (ಸೋಲಾಪುರ)

* ಸ್ವಾಮಿಗಳ ಬಗ್ಗೆಯೇ ಬರೆವ ನಿಮ್ಮ ವಿರು ಉಗ್ರಕ್ರಮ ತೆಗೆದುಕೊಳ್ಳಬೇಕೆಂದಿದ್ದ ಎಲ್ಲಿ ಸಿಗ್ತೀರಾ ?

– ಸ್ವಾಮಿಗನ್ನೇ ಕೇಳಿ

ಶಶಿಕಾಂತ ರಾಪೂರೆ ಬಳ್ಳಾರಿ

* ನಾನು ಒಬ್ಬ ಬುದ್ಧಿ ಜೀವಿಯಾಗಬೇಕೆ ದ್ದೇನೆ ಏನು ಮಾಡಲಿ ?

– ಗಡ್ಡಬಿಡಿ ಹಾಗೂ ಬಗಲಿಗೆ ಒಂದು ಗೋ ಚೀಲ ಇಳಿಬಿಡಿ

ಲಲಿತಾ ಆರ್. ನಾಯಕ ಗೊಂದೇನೂರ

* ಮೇಜಿನ ಕೆಳಗಿನ ರಾಜಕೀಯ ಅಂತಾ ಹಾಗೆಂದರೇನು ?

– ಮೊನ್ನೆ ಪ್ರಧಾನಿಯಾಗಲು ಚಂದ್ರಶೇ ಮಾಡಿದರಲ್ಲಾ ಅದು !

ರಮಾದೇವಿ ದೇಶಪಾಂಡೆ ಬೆಳಗಾವಿ

* ಅಂಕಲ್ ಹುಡುಗರು ಯಾವಾಗಲೂ ಜೇ ಹಣಿಗೆ ಇಟ್ಟುಕೊಂಡಿರಲು ಕಾರಣ ?

– ಅವರ ಜೇಬಲ್ಲಿ ಕನ್ನಡಿಗಳೂ ಇ ಸೂಚನೆ ಇದೆಯಂತೆ !

ಗೋಪಾಲ ಶಹಾಪುರ

* ಚುನಾವಣೆಯಲ್ಲಿ ಎಂಥವರನ್ನು ಚುನಾ ಸೋಣ ?

– ಕನಿಷ್ಟ ನಾಚಿಕೆಯಾದರೂ ಇದ್ದವರನ

ಗೋಪಾಲ ಹೂವಿನ ಹಿಪ್ಪರಗಿ

* ಮುಖಸ್ತುತಿ ಬಯಸದ ಮನುಷ್ಯ ಕಂಡಿದ್ದೀರಾ ?

–ಹಾಗಾದರೆ ಅವನು ಮನುಷ್ಯ ಹೇಗಾದ

ಮುದ್ರಣ: ಗ್ರಿನೋಬಲ್ಸ ಪ್ರಾ. ಲಿ. ಸುಪರ್ ಮಾರ್ಕೆಟ, ಗುಲ್ಬರ್ಗಾ ಫೋನ್ : 20822
ಸಂಪಾದಕರು, ಪ್ರಕಾಶಕರು: ವಿಶ್ವಾರಾಧ್ಯ ಸತ್ಯಂಪೇಟೆ, ಶಹಾಪುರ–ಗುಲ್ಬರ್ಗಾ